ಸಹೃದಯ ವಾಚಕರಿಗೆ

**ಅರ್ಪಿಸಿದೆ.**

# ಅರಿಕೆ

ಈ ಕಥಾಸಂಗ್ರಹಕ್ಕೆ ಈ ಮೊದಲ ಮಾತು ಅಗತ್ಯವಾಗಿರಲಿಲ್ಲ. ಹೇಳಬೇಕಾದುದನ್ನೆಲ್ಲ ಕತೆಗಳೇ ಹೇಳುವುದರಿಂದ ಅವುಗಳ ವಿಚಾರವಾಗಿ ಯಾರ ವಕಾಲತ್ತೂ ಬೇಕಾಗಿಲ್ಲ. ಯಾರು ಯಾರನ್ನೂ ಕೈದೀವಿಗೆ ಹಿಡಿದು ನಡೆಯಿಸಬೇಕಾಗಿಲ್ಲ. ಕತೆಗಳಲ್ಲಿ ರಸವನ್ನೋ ಕಸವನ್ನೋ ಓದುಗರೇ ಕಾಣಬಲ್ಲವರಾಗಿರುವರು.

ಆದರೆ ಯಾವ ಉದ್ದೇಶದಿಂದ ಈ ಪುಸ್ತಕ ಈಗ ಹೊರಬೀಳುತ್ತಿರುವುದೋ ಅದನ್ನು ಸ್ವಲ್ಪಮಟ್ಟಿಗಾದರೂ ಹೇಳದಿದ್ದರೆ ನಮ್ಮ ಕರ್ತವ್ಯ ಭಾಗವನ್ನು ನಿರಾಕರಿಸಿದಂತಾಗುತ್ತದೆ. ಆದ್ದರಿಂದ ಅದನ್ನು ನಾಲ್ಕು ಮಾತಿನಲ್ಲಿ ಬಿನ್ನವಿಸಿಕೊಳ್ಳಲಾಗಿದೆ.

ಸಣ್ಣಕತೆ ಸಾಹಿತ್ಯದ ಒಂದು ಮುಖ್ಯಾಂಗವೆಂದು ಭಾವಿಸಿ ಅದನ್ನು ಆದರದಿಂದ ಬರಮಾಡಿಕೊಂಡು ಸಹನೆಯಿಂದ ನೋಡುವ ದೃಷ್ಟಿ ನಮ್ಮವರ ಅಭ್ಯಾಸಕ್ಕೆ ಬಂದು ಬಹಳ ದಿವಸವಾಗಿದೆ. ನಮ್ಮ ಸಾಹಿತ್ಯದ ಈ ಶಾಖೆ ಎಷ್ಟು ಬೆಳೆದಿದೆ ಎಂಬುದಕ್ಕೆ ಈಗ ಎಲ್ಲೆಲ್ಲೂ ನಡೆಯುತ್ತಿರುವ ಬಹುಮುಖವಾದ ಪ್ರಯೋಗಪ್ರಯತ್ನಗಳೇ ಸಾಕ್ಷಿಯಾಗಿವೆ. ಫಲವೇನೇ ಆದರೂ—ಈಗಿನ ಸಾಹಿತ್ಯಾಂದೋಲನದಲ್ಲಿ ಯಾವ ಕೃತಿ ಎಲ್ಲಿ ಹೋಗಿ ನಿಲ್ಲುವುದೋ ಎಂಬುದನ್ನು ಖಚಿತವಾಗಿ ಹೇಳುವುದು ಕಷ್ಟವಾದರೂ—ಕೆಲಸ ಮಾತ್ರ ಉತ್ಸಾಹದಿಂದ, ಶ್ರದ್ಧೆಯಿಂದ ನಡೆಯುತ್ತಿದೆ. ಇದು ಸಂತೋಷದ ಸಂಗತಿ. ಆದರೆ ಈ ಸಂತೋಷದ ಮರೆಯಲ್ಲಿ ಒಂದು ಅತೃಪ್ತಿ, ಒಂದು ಜುಗುಪ್ಸೆ, ಒಂದು ತೀರದ ಆಶೆ ಈಗ ಕೆಲವರಿಗೆ ಕಾಣುತ್ತಿದೆ. ಪ್ರಾಯಶಃ ಸಣ್ಣಕತೆಯಲ್ಲಿ, ಅದರ ಬೆಳೆವಣಿಗೆಯಲ್ಲಿ ವಿಶ್ವಾಸವುಳ್ಳವರಿಗೆಲ್ಲ ಇದು ಕಂಡಿರಬಹುದು, ಕಾಣುತ್ತಿರಬಹುದು.

ಈಗ ನಮ್ಮ ಜನದ ಕೈಗೆ ಸಿಕ್ಕುತ್ತಿರುವ ನೂರು ಕತೆಗಳಲ್ಲಿ ಸತ್ತಾದರೂ ಒಳ್ಳೆಯ ಉದ್ದೇಶದಿಂದ ಕೂಡಿರುವುದಿಲ್ಲವಲ್ಲ ಎಂಬುದು ಅತೃಪ್ತಿ.—ಈಗ ಪ್ರಕಟವಾಗುತ್ತಿರುವ ಮುಕ್ಕಾಲು ಪಾಲು ಕತೆಗಳಲ್ಲೆಲ್ಲ ಅಸಹ್ಯರೀತಿಯ ಅರ್ಥವಿಲ್ಲದ ವಸ್ತುಗಳಲ್ಲದೆ ಬೇರೆ ದೊಡ್ಡ ಮಾರ್ಗವೇ ಇಲ್ಲವಲ್ಲ; ಪೂರ್ವಾಚಾರ ಭರ್ತ್ಸನೆ, ಸಮಾಜಸೇವಾರೂಪ ಸ್ವಾರ್ಥಸಾಧನೆ, ನಿತ್ಯಜೀವನದ ಚರ್ವಿತ ಚರ್ವಣವಾದ ಸಂದರ್ಭಗಳು,—ಮೊದಲಾದುವನ್ನು ವಸ್ತುಗಳಾಗುಳ್ಳ ಈ ಪ್ರಪಂಚವನ್ನು ಮೀರಿ ಮತ್ತೊಂದಿಲ್ಲವಲ್ಲ ಎಂಬುದು ಜುಗುಪ್ಸೆ. ಆಳವಾದ ಮಾನವಚಿತ್ತವೃತ್ತಿಯನ್ನು, ವಿಚಿತ್ರ ಮನೋಭಾವಗಳನ್ನು ವಿವಿಧಮುಖಗಳಲ್ಲಿ ರಸಭರಿತವಾಗಿ ಚಿತ್ರಿಸುವ ಕತೆಗಳು ಹುಟ್ಟುವುದಿಲ್ಲವೆ? ಹುಟ್ಟಲಾರವೆ? ನಮ್ಮ ಕತೆಗಾರರ ಮನಸ್ಸು ಈ ಸಂಪ್ರದಾಯಕ್ಕೆ ಒಟ್ಟಾಗಿ ಒಗ್ಗಿಲ್ಲವೆ? ಕನ್ನಡದಲ್ಲಿ ಕತೆಗಾರಿಕೆ ಇನ್ನೂ ಈ ಹದಕ್ಕೆ ಬಂದಿಲ್ಲವೆ? ಬರುವುದಿಲ್ಲವೆ? ಎಂಬುದು ತೀರದ ಆಶೆಯಾಗಿಯೇ ಉಳಿದಿದೆ.

ಎಂದರೆ, ಈ ಆಶೆಯನ್ನು ಪೂರ್ಣಗೊಳಿಸಿರುವುದಕ್ಕೆ ಈ ಸಂಗ್ರಹವೇ ನಿದರ್ಶನವೆಂದೂ, ಈ ಉದ್ದೇಶಸಾಧನೆ ಇಲ್ಲಿ ಪ್ರತಿಚಿತ್ರಗಳಾಗಿ ಪರಿಣಮಿಸಿವೆಯೆಂದೂ ಹೇಳಿಲ್ಲ. ಆದರೂ ಈ ಸಂಗ್ರಹದ ಕತೆಗಳೆಲ್ಲ ಒಂದಲ್ಲ ಒಂದು ದೃಷ್ಟಿಯಿಂದ ಮನುಷ್ಯ ಹೃದಯದ, ಸ್ವಭಾವದ, ಜೀವನದ, ಸನ್ನಿವೇಶದ ಬಹು ಭಾಗವನ್ನು ಚಿತ್ರಿಸುವುದಕ್ಕೆ ಪ್ರಯತ್ನಿಸಿವೆ ಎಂದು ಮಾತ್ರ ಸಂಕೋಚದಿಂದ ಹೇಳಬೇಕಾಗಿದೆ. ಈ ಕತೆಗಳಲ್ಲಿ ಓದುಗರಿಗೆ ಒಂದು ಹೊಸ ದಾರಿ ಕಂಡರೆ, ಒಂದು ಆಶೆ ಮೈದೋರಿದರೆ, ಒಂದು ತೃಪ್ತಿ ಲಭಿಸಿದರೆ "ಫೆಯರ್ ಟಾಂಗ್" ಸಂಘದ ಬಯಕೆ ಕೈಗೂಡಿದಂತೆ.

—ಎಸ್. ವೆಂಕಟರಾವ್.

# ಪರಿವಿಡಿ



* "The Lesson" (Jerome K. Jerome) ಎಂಬುದರ ಅನುವಾದ.

† ಇದು O'Henry ಯ "The Pendulum" ಎಂಬುದರ ಆಧಾರದ ಮೇಲೆ ರಚಿತವಾಗಿದೆಯೆಂದು ಕೆಲವರು ಹೇಳುತ್ತಿದ್ದಾರೆ. ನಾವು ಅದನ್ನು ಒಪ್ಪುವುದಿಲ್ಲ. ಆ ಹೇಳಿಕೆಯ ಸತ್ಯಾಸತ್ಯಗಳನ್ನು ಓದುಗರೇ ನಿರ್ಣಯಿಸಬಹುದು.

‡ "Markhiem" (R. L. Stevenson) ಎಂಬುದರ ಅನುವಾದ.

# ಉಪದೇಶ



"ನಾಯಮಾತ್ಮಾ ಬಲಹೀನೇನಲಭ್ಯಃ" —ಉಪನಿಷತ್.

ನನಗೆ ನೆನಪಿರುವ ಮಟ್ಟಿಗೆ ನಾನು ಮೊದಲು ಆತ ನನ್ನು ನೋಡಿದುದು ದುರ್ಗಂಧ ಬೀರುತ್ತಿದ್ದ ಹಡಗಿನಲ್ಲಿ.

ರಂಗೂನಿನಿಂದ ಮದರಾಸಿಗೆ ಪ್ರಯಾಣಮಾಡುತ್ತಿದ್ದೆ. ಆತನು ಸಿಂಗರಿಸಿಕೊಂಡಿದ್ದ ಯುವತಿಯೊಬ್ಬಳೊಂದಿಗೆ ಸಲ್ಲಾಪ ನಡೆಸುತ್ತ, ಹಡಗಿನ ಬಯಲಲ್ಲಿ ಸುತ್ತಾಡುತ್ತಿದ್ದನು. ಇಬ್ಬರೂ ಆಗಾಗ್ಗೆ ನಗುತ್ತಿದ್ದರು. ಆತನು ಉಡುಗೆತೊಡುಗೆಗಳಿಂದ ಕೋಟ್ಯಾಧೀಶ್ವರನಂತೆ ಕಾಣುತ್ತಿದ್ದನು. ಕೈ ಬೆರಳಿನ ಉಂಗುರಗಳೊಂದೊಂದೂ ಸಾವಿರಾರು ಬೆಲೆ ಬಾಳುತ್ತಿದ್ದುವು. ಅಂಥವನು ನನ್ನ ಜೀವದ ಗೆಳೆಯನಾದುದು ಆಶ್ಚರ್ಯವೆ! ಹಾಗಾಗಲೇ ಬೇಕಾಗಿದ್ದಿತು.

ನನಗೆ ರಂಗೂನಿನ ವರ್ತಕರೊಬ್ಬರಲ್ಲಿ ಉದ್ಯೋಗ. ಸಾಮಾನುಗಳ ಯೋಗ್ಯತಾಪರೀಕ್ಷಕನಾಗಿದ್ದೆ. ಇನ್ನೂರು ರೂಪಾಯಿಗಳು ಸಂಬಳ. ಹಿಂದೂದೇಶದಲ್ಲಿ ತಯಾರಾದ ಪದಾರ್ಥಗಳನ್ನು ಇತರ ರಾಷ್ಟ್ರಗಳಿಗೆ ಲಾಭದ ಮೇಲೆ ಹಂಚುವುದು ನಮ್ಮ ವ್ಯಾಪಾರ.

ಮಧ್ಯಾಹ್ನ ಊಟವಾದಮೇಲೆ ಬಿಸಿಲು ಕಾಯಿಸುತ್ತ ನಿಂತಿರುವಲ್ಲಿ, ಆತನು ತನಗಾಗಿ ಮೀಸಲಿದ್ದ—ಹಡಗಿನ ಒಂದೇ ಆದ–ಬಿಡಾರದಿಂದ ಹೊರಬಿದ್ದು ನನ್ನ ಮುಂದೆ

ನಿಂತುಕೊಂಡನು. ಬಾಯಲ್ಲಿ, ದಪ್ಪ ತುಟಿಗಳ ನಡುವೆ ಇದ್ದ ದಿಂಡಿಗಲ್ ಚುಟ್ಟದಿಂದ ಹೊರಡುತ್ತಿದ್ದ ಹೊಗೆಯ ನಡುವೆ—" ವಿರಾಮ ಕಾಲವನ್ನು ನೂಕುತ್ತಿರುವಂತಿದೆ " ಎಂದನು.

ಮೊದಲು ತಿಳಿಯಲಿಲ್ಲ. ಮಾತನಾಡಿದ ಮೇಲೆ, ತೊದಲನ್ನು ಕೇಳಿ, ಇತನು ನಾಟ್‌ಕೋಟೆ ಶೆಟ್ಟಿಯೆಂದು ತಿಳಿದೆ. ಒರಟಾದ ನೃಶಂಸ ಭಂಗಿ. ಚಂಚಲವಾದ ತೇಜೋಮಯವಾದ ಕಣ್ಣುಗಳು. ವಿಲಕ್ಷಣ ಗುಣ ಚೈತನ್ಯವನ್ನು ಹೊಮ್ಮುವ ಮುಖ. ಹೇಯಾಳಿಸುವ ಗಡುಸಾದ ಧ್ವನಿ. ಸಂವಾದಿಸುವವರು ತನಗಿಂತಲೂ ಕೀಳೆಂಬ ಭಾವನೆಯನ್ನು ತುಂಬಿಕೊಂಡು ಬರುವ ಧ್ವನಿ. ಆ ಭಾವನೆ ಕೆಲವು ಸಮಯಗಳಲ್ಲಿ ಹೆಚ್ಚಿ ತನ್ನ ಪ್ರಾಮುಖ್ಯತೆಯನ್ನು ತೋರಿಸುವುದು. ಒಟ್ಟಿನಲ್ಲಿ ಆತನ ಮುಖದರ್ಶನವೇ ಭಯಮಿಶ್ರಿತವಾದ ಮೆಚ್ಚುಗೆಯನ್ನು ಸ್ಫುರಿಸುತ್ತಿದ್ದಿತು.

" ಹೌದು," ಎಂದು ನುಡಿದು, " ದಕ್ಷಿಣ ಭಾರತದ ಸೌಂದರ್ಯಕ್ಕೆ ಮಾರುಹೋದವರಲ್ಲಿ ನಾನೂ ಒಬ್ಬ. ನನ್ನ ಈ ಪ್ರವಾಸವು ಕೇವಲ ಈ ಭಾವನೆಯಿಂದ ಪ್ರಚೋದಿತವಾದುದು," ಎಂದೆ.

" ವಿರಾಮವೆಷ್ಟು ದಿನಗಳು ? "

" ಎರಡು ವಾರ ಮಾತ್ರ."

" ಮಧುರಾ ಹಂಪೆಗಳು, ಎಲ್ಲೋರ ಅಜಂತಗಳು, ಬೇಲೂರು ಹಳೇಬೀಡುಗಳನ್ನು ನೋಡಿ ನಲಿಯ

ಬಹುದು. ದಕ್ಷಿಣ ಭಾರತವು ಪ್ರಕೃತಿ ದೇವಿಯ ನಾಟ್ಯ ರಂಗ. ಜೊತೆಗೆ ಶಿಲ್ಪರಸಕಲಾವೈಭವ! ನಾನು ಆಂಧ್ರ ದೇಶದವನು."

"ಇಂಗ್ಲಿಷನ್ನು ಅಷ್ಟು ಸೊಗಸಾಗಿ ಮಾತನಾಡುವಿ ರಲ್ಲ, ಆಂಗ್ಲೇಯರಂತೆಯೆ," ಎಂದೆ.

ಆತನನ್ನು ಸಂತಸಗೊಳಿಸಬೇಕೆಂಬುದೇ ನನ್ನ ಇಷ್ಟ. ಏಕೆಂದು ಹೇಳಲಾರೆ.

"ಇನ್ನೂ ಆರೇಳು ಭಾಷೆಗಳು ಬರುವುವು," ಎಂದು ನಗುತ್ತ ನುಡಿದು, "ಬಳ್ಳಾರಿಯನ್ನು ನನ್ನ ಹದಿನೆಂಟ ನೆಯ ವಯಸ್ಸಿಗೆ ಬಿಟ್ಟುದು. ಅದರ ಸುತ್ತ ಮುತ್ತ ವ್ಯಾಪಾರಾರ್ಥವಾಗಿ ಬಂದಿದ್ದರೂ ತೌರೂರಿಗೆ ಹೋಗು ತ್ತಿರುವುದು ಈಗಲೆ" ಎಂದನು.

ಮುಂದೆ ಬಂದು ತನ್ನ ಬಾಹುವನ್ನು ನನ್ನ ಹೆಗಲ ಮೇಲೆ ಬಳಸಿ, "ಈಗೊಂದು ಕಾರ್ಯನಿರ್ದೇಶ. ಕ್ಷಣ ವಾದರೂ ಬಿಟ್ಟಿರಲಾರದಷ್ಟು ಆತುರ ವ್ಯಾಪಾರ ನನ್ನದು," ಎಂದು ತಾನಿದ್ದ ಬಿಡಾರವನ್ನು ದಿಟ್ಟಿಸಿದನು. ಸಣ್ಣ ನಗುವನ್ನು ನಕ್ಕು, "ನನ್ನ ಜೊತೆಯಲ್ಲಿ ಸಿಬ್ಬಂದಿ ಯನ್ನು ಕರೆತರದಿರುವುದಕ್ಕೆ ಕಾರಣವುಂಟು. ನಿಮ್ಮ ಪ್ರವಾಸದಲ್ಲಿ ನನ್ನ ವ್ಯಾಪಾರ ಪ್ರಸಾರಕ್ಕೆ ಅನುಕೂಲ ಮಾಡಿಕೊಟ್ಟರೆ, ಮುಟ್ಟುವ ವೆಚ್ಚವನ್ನು ಕೊಡಲು ನಾನು ಬದ್ಧ. ಕೊನೆಯಲ್ಲ ಇನ್ನೂರು ರೂಪಾಯಿಗ ಳನ್ನು ಸ್ನೇಹದ ಕಾಣಿಕೆಯಾಗಿ ಕೊಡಬಲ್ಲೆ. ದಿನವೂ ಎರಡು ಗಂಟೆ ನನ್ನ ಕೆಲಸ ಮಾಡಿಕೊಟ್ಟರೆ ಸಾಕು," ಎಂದನು.

ನನ್ನ ಮುಖವು ಒಪ್ಪಿಗೆಯನ್ನು ಸೂಚಿಸಿತೆನ್ನುವು ದನ್ನು ಅರಿತು, ನನ್ನನ್ನು ಮಾತನಾಡಗೊಡದೆ, "ನಿಮ್ಮಿಂದ ಒಂದು ಪ್ರತಿಜ್ಞೆಯಾಗಬೇಕು. ಕೆಲಸದ ಕಡೆಗೆ ಮಾತ್ರ ಗಮನ ಕೊಡಬೇಕು. ಯಾರಲ್ಲಿಯೂ ಬಾಯಿ ಬಿಡಬಾರದು," ಎಂದು ಹೇಳಿ, ಕೊಂಚ ತಡೆದು, "ನೀವೊಬ್ಬರೇ ಇರುವಿರಲ್ಲವೆ?" ಎಂದನು.

"ಹೌದು," ಎಂದೆ. ಜೇಬಿನಿಂದ ಒಂದು ಪುಸ್ತಕ ವನ್ನು ಸೆಳೆದು, ಹಾಳೆಯೊಂದರಲ್ಲಿ ಏನನ್ನೊ ಬರೆದು, ಆ ಹಾಳೆಯನ್ನು ಹರಿದು, "ಮದರಾಸಿನಲ್ಲಿ ಅಲ್ಲಿಯೇ ನೀವು ಇಳಿದುಕೊಳ್ಳುವ ಸ್ಥಳ. ನಾರಾಯಣ ಗುಪ್ತರ ಕಾರ್ಯದರ್ಶಿಗಳು ನೀವು," ಎಂದು ತನ್ನ ಹೆಸರನ್ನು ಠೀವಿ ಯಿಂದ ನುಡಿದನು. ಆ ಹೆಸರು, ನನ್ನ ಮನಸ್ಸಿಗೇಕೋ ತಕ್ಕುದಾಗಿ ತೋರಲಿಲ್ಲ.

"ಬೆಳಗ್ಗೆ ಒಂಬತ್ತು ಗಂಟೆಗೆ ನನ್ನ ಆಫೀಸಿಗೆ ಬಂದು ನನ್ನನ್ನು ಕಾಣಿರಿ, ನಮಸ್ಕಾರ" ಎಂದು ನುಡಿದು ತಾನು ಹೇಗೆ ಮಾತನ್ನುಪಕ್ರಮಿಸಿದನೋ ಹಾಗೆಯೇ ಉಪಸಂ ಹಾರಮಾಡಿದನು.

ಮರುದಿನ ಬೆಳಗ್ಗೆ ಆತನು ಹೇಳಿದ್ದ ಕಡೆಗೆ ಹೋದೆ. ಆಹೊತ್ತಿಗೆ ತಾನೂ ಹೊರಕ್ಕೆ ಬಂದಿದ್ದು, ತನ್ನ ವ್ಯವ ಸ್ಥಾಪಕನೊಂದಿಗೆ ತೆನುಗಿನಲ್ಲಿ ನನ್ನ ವಿಚಾರವಾಗಿ ಏನನ್ನೋ ಹೇಳುತ್ತಿದ್ದನು.

ನನ್ನನ್ನು ಕಂಡೊಡನೆಯೆ ಬಹು ಆದರದಿಂದ ಬರ ಮಾಡಿಕೊಂಡನು. ಫಲಾಹಾರ ಮಂದಿರದಲ್ಲಿ ದೊಡ್ಡ ಔತಣವೇ ಆಗಿ ಹೋಯಿತು.

ತಿಳಿಸಿದಂತೆಯೆ ಪ್ರತಿದಿನವೂ ಬೆಳಿಗ್ಗೆ ಎರಡು ಗಂಟೆಗಿಂತ ಹೆಚ್ಚು ಕೆಲಸವಿಲ್ಲ. ಕಾರ್ಯವಿಷ್ಟೆ. ಪತ್ರವ್ಯವಹಾರ, ತೀವ್ರಕಾರ್ಯಸಾಧನೆಗೆ ತಂತೀವರ್ತಮಾನ ಕಳುಹಿಸುವುದು. ಪತ್ರಗಳನ್ನು ತಾನೇ ರುಜುಮಾಡಿ ತಪಾಲಿಗೆ ಕಳುಹಿಸುತ್ತಿದ್ದುದರಿಂದ ಆತನ ನಿಜವಾದ ಹೆಸರು ಪತ್ತೆಯಾಗಲಿಲ್ಲ. ಆದರೆ ಆತನ ವ್ಯಾಪಾರಕ್ಕೆ ಸಂಬಂಧಪಟ್ಟ ಚಟುವಟಿಕೆಯ ಕಾರ್ಯಗೌರವ, ಬಂದು ಹೋಗುವ ಜನ ಸಂದಣಿಗಳಿಂದ ಆತನು ಕೀರ್ತಿವಂತನೂ, ಹಿರಿಯ ಹೆಸರುಳ್ಳವನೂ ಆಗಿರಬೇಕೆಂದು ತೋರಿತು.

ಆತನು ತನ್ನ ಹೆಂಡತಿಯ ವಿಚಾರವನ್ನು ನನಗೆ ತಿಳಿಸಲಿಲ್ಲ. ಕೆಲವು ದಿನಗಳಾದ ಮೇಲೆ ಇಬ್ಬರಿಗೂ ಮನಸ್ತಾಪ ಬಂದಿತೇನೋ, — ಸಾಯಂಕಾಲಗಳಲ್ಲಿ ಆಕೆಯ ಬದಲು ನಾನು ಆತನ ಜೊತೆಯಲ್ಲಿ ವಾಯುವಿಹಾರಕ್ಕೆ ಹೊರಡುತ್ತಿದ್ದೆ.

ಆತನನ್ನು ಕಂಡರೆ ನನ್ನಲ್ಲಿ ಏನೋ ವಿಶ್ವಾಸ ಜನಿಸುತ್ತಿದ್ದಿತು. ಶಕ್ತಿಯು ಎಂದಿಗೂ ಯೌವನದ ಮೆಚ್ಚನ್ನು ಪಡೆಯುವುದು. ಆತನ ನಡೆನುಡಿಗಳಲ್ಲಿ ಅಸಾಧಾರಣವಾದ ಕೆಚ್ಚೂ, ಹಿರಿಮೆಯೂ ಇದ್ದುವು. ಆತನ ಶೀಘ್ರಧೀರ ಸಿದ್ಧಾಂತಗಳು, ಅಧರ್ಮಕ್ಕೆ ಹಿಮ್ಮೆಟ್ಟಿ ಹಿಂತೆಗೆಯದ ಅದಟುತನ, ನಿರ್ವಾಹವಿಲ್ಲದಾಗ ಆಗಾಗ್ಗೆ ತೋರುವ ಕೋಪ, ಇವೆಲ್ಲ ಬಹು ಆಕರ್ಷಕವಾಗಿದ್ದುವು. ಕಿರಾತಗುಂಪಿನ ಹುಟ್ಟುನಾಯಕನೂ, ಹೋರಾಟದ ಸಲುವಾಗಿ ಮಾತ್ರ ಹೋರಾಡಲು ನಲಿಯುವವನೂ, ಉಗ್ರಾಹ್ವಾನವಿತ್ತು ಎಡರುಗಳನ್ನು ಇದಿರಿಸುವವನೂ, ಪ್ರಗ

ತಿಯ ಉನ್ಮಾದದಲ್ಲಿ ದುಃಖನಾಶಗಳಿದ್ದರೂ ನೆಚ್ಚುಗೆಡದೆ ಗುರಿಗೆ ಮುನ್ನುಗ್ಗುವವನೂ, ಆದರೂ ಕ್ರೂರ ನ್ಯಾಯ ಶೀಲನೂ, ಅಪಾಯಕ್ಕೆ ಹೊರಳದ ಪ್ರೇಮ ಮಾನಸನೂ ಹಿಂದೆ ಇದ್ದಿರಬೇಕು.

ಒಂದು ಮಧ್ಯಾಹ್ನ ಮೈಲಾಪುರದಲ್ಲಿ, ಹಾಸುಹೊಕ್ಕಿನಂತಿದ್ದ ಕೊಳಕು ಸಂದಿಗೊಂದಿಗಳನ್ನು ಹಾದು, ಜನ ನಿಬಿಡವಾದ ಸ್ಥಳಕ್ಕೆ ನನ್ನನ್ನು ಕರೆದೊಯ್ದನು. ಅಲ್ಲಿ ಕ್ಷಣಕಾಲ ನಿಂತು ಮೂರು ಅಂತಸ್ತಿನ ಮಹಡಿಯ ಮನೆಯೊಂದನ್ನು ದಿಟ್ಟಿಸಿದನು. ಹತ್ತಿರದಲ್ಲಿಯೆ ಸುತ್ತಲಿನ ರೊಚ್ಚುನೀರು ಹರಿಯುವ ಮೋರಿಯಿದ್ದಿತು.

"ಅಗೊ, ಆ ಕೋಣೆಯಲ್ಲಿ ನಾನು ಹುಟ್ಟಿದುದು; ಆ ಮುರಿದ ಗಾಜಿನ ಕಿಟಕಿಯಿದೆಯಲ್ಲ, ಅದು. ಆಗಿನಿಂದ ಅದನ್ನು ಸರಿಪಡಿಸಲಿಲ್ಲ" ಎಂದನು.

ಆಗಲೆ ಆತನ ಕಡೆಗೆ ದೃಷ್ಟಿಯನ್ನು ಸಾರಲು, ಮುಖವು ಯಾವ ಮಮತೆಯನ್ನೂ ಬಯಲು ಮಾಡದೆ ವಿನೋದ ಪಡುವಂತಿದ್ದಿತು.

ದಿಂಡಿಗಲ್ಲಿನ ಚುಟ್ಟವನ್ನು ನನಗೆ ಕೊಟ್ಟನು. ಅದನ್ನು ಕಂಡರೆ ನನಗೆ ತುಂಬ ಇಷ್ಟ. ಅಲ್ಲದೆ ಮೋರಿಯಲ್ಲಿ ಹರಿಯುತ್ತಿದ್ದ ದುರ್ಗಂಧವು ಹುಚ್ಚುಹಿಡಿಸುತ್ತಿತ್ತು. ಅದಕ್ಕೇ ಸ್ವಲ್ಪ ಹೊತ್ತು ಮೌನವಾಗಿ ಧೂಮಪಾನ ಮಾಡಿದೆವು.

"ಕಟುಕನ ಸಹಾಯಕನಾದ ತಂದೆಯನ್ನೂ ಕ್ಷಯ ರೋಗಿಯಂತಿದ್ದ ಹೂವಾಡಿಗಿತ್ತಿ ತಾಯನ್ನೂ ಪಡೆದ ನನ್ನ ಈ ವೃತ್ತಿಯ ಆರಿಕೆಯು ಅತಿ ವಿಚಿತ್ರವಲ್ಲವೆ?

ಮುಂದೆ ನಾನೇನನ್ನು ಬಯಸಿದೆನೋ ಅದೇ ಈಡೇರಿತು. ಆತನ ಮಾತು ವಿಡಂಬನೆಯೋ ಇಲ್ಲ ಗಂಭೀರವೋ ಅರಿಯೋಣವೆಂದು ಮುಖವನ್ನು ನಟ್ಟನೋಟದಿಂದ ದಿಟ್ಟಿಸಿದೆ. ಆತನ ಮಾತಿನಲ್ಲಿ ಪ್ರಹಸನದ ನಿರಂತರ ಸ್ಪಂದನವು ನನ್ನನ್ನು ಆಶ್ಚರ್ಯ ಚಕಿತನನ್ನಾಗಿ ಮಾಡಿತು

"ಈ ಆರಿಕೆಯು ಅಪಾಯ, ಸಂದೇಹ, ಸಾಹಸ ಪೂರ್ಣವಾಯಿತು. ಇನ್ನೊಂದು ಬಾರಿ ಕ್ಷೇಮಕರವಾದ, ಅಪಾಯರಹಿತವಾದ ಆರಿಕೆಯನ್ನು ಮಾಡಿ," ಎಂದೆ.

ತಕ್ಷಣವೇ ನನ್ನ ಕಡೆಗೆ ತಿರುಗಿದನು. ಮನಸ್ಸಿನ ಪರಿಸ್ಥಿತಿ ಹೇಗೋ ಎಂದು ಅಧೀರನಾದೆ.

"ಬಹುಶಃ ನಿಮ್ಮ ಮಾತು ಸತ್ಯವಿರಬೇಕು. ಅದರ ವಿಚಾರ ಮುಂದೆ ಇಬ್ಬರೂ ಮಾತನಾಡೋಣ" ಎಂದು ನಕ್ಕನು.

ಅಂದಿನಿಂದ ಆತನು ನನ್ನಲ್ಲಿ ಹೆಚ್ಚು ಬಳಕೆಯಿಂದಿರಲಾರಂಭಿಸಿದನು. ಇಬ್ಬರೂ ಸೇರಿ, ಆತನಿಗೆ ರುಚಿಸಬಹುದೆಂದು ನಾನು ಎಣಿಸದಿದ್ದ ಅನೇಕ ವಿಷಯಗಳನ್ನು ಚರ್ಚಿಸುತ್ತಿದ್ದೆವು. ಆತನನ್ನು ವಿಜಾತೀಯ ಮಿಶ್ರಜೀವಿಯೆಂದರಿತೆ. ಯುಕ್ತಿವಿವೇಕಶಾಲಿಯಾದ ಕಟು ಹಾಸ್ಯಗಾರನಾದ ವ್ಯಾಪಾರಿಯಲ್ಲಿ ಕಣಸುಗಾರನ ಅವಿಶ್ರಾಂತವಾದ, ತಿಳಿಯಾದ ಚಿಲುಮೆಗಳನ್ನು ಕಾಣುತ್ತಿದ್ದೆ.

* * * *

ಒಂದು ದಿನ ನನ್ನ ಗ್ರಂಥ ಪ್ರಕಟನ ಮಂದಿರದವರ ವಿಳಾಸಕ್ಕೆ ಒಂದು ಪತ್ರ ಬಂದಿತು. ಟಿಬೆಟ್ ದೇಶದ

ಅಂಚೆ ಮುದ್ರೆಯಿದ್ದಿತು. ನಾರಾಯಣಗುಪ್ತರೆಂದು ಸಹಿ ಮಾಡಿದ್ದ ಪತ್ರವನ್ನು ನೋಡಿ ಚಕಿತನಾದೆ.

ಆತನು ಕೈಲಾಸ ಯಾತ್ರೆ ಹೊರಟು, ಸಹಚರರು ಇನ್ನು ಹತ್ತಲಾಗದೆಂದು ನಿಂತರೂ, ಹಠದಿಂದ, ಉತ್ಸಾಹ ದಿಂದ ಹತ್ತಿ ಬಿದ್ದನು. ಕೈಕಾಲು ಮುರಿಯಿತು

ಬಡವನೊಬ್ಬನ ಗುಡಿಸಿಲಿನಲ್ಲಿ ಬಿದ್ದಿರುವನು. ತಾನೇ ಬರೆದಿರುವಂತೆ, ಹುಡುಗಾಟಕ್ಕೆ ಆ ವಯಸ್ಸಿನಲ್ಲಿ ಹಿಮಗಿರಿ ಯನ್ನು ಹತ್ತಬಲ್ಲನೆಂದು ಹತ್ತಿಬಿದ್ದವನು. ಯಾರೋ ವೈದ್ಯರು ಮೂರು ದಿನಕ್ಕೊಮ್ಮೆ ಬಂದು ಔಷಧವನ್ನು ಕೊಡುತ್ತಿರುವರು. ಹೊತ್ತು ಕಳೆಯಲು ಸರಿಯಾದ ಸಂಗಡಿಗರಿಲ್ಲದೆ ಬೇಜಾರಾಗುತ್ತಿರುವುದರಿಂದ, ಬಿಡು ವಿದ್ದರೆ ನಾನು ಬರಬೇಕೆಂದು ಬೇಡಿರುವನು. ಪ್ರಯಾ ಣದ ವೆಚ್ಚಕ್ಕೆಂದು ಐನೂರು ರೂಪಾಯಿಗಳನ್ನು ಕಳು ಹಿಸಿ ತಾನು ಹಾಗೆ ಮಾಡಿದುದಕ್ಕೆ ಕ್ಷಮೆ ಕೂಡ ಕೋರ ಲಿಲ್ಲ. ನಾನು ಬರೆದ ಮೊದಲನೆಯ ಪುಸ್ತಕವನ್ನು ಹೃದಯಾರ ಮೆಚ್ಚಿರುವುದಾಗಿ ಬರೆದಿರುವನು. ಆತನದು ವ್ಯಾಪಾರ ಪ್ರಪಂಚದಲ್ಲಿ ಕೀರ್ತಿಗಳಿಸಿದ ಹೆಸರೆಂದು ನಾನು ಎಣಿಸಿದುದು ನಿಜ. ಆ ಹೆಸರನ್ನು ಈಗ ಬರೆದು ನನ್ನ ಬರವನ್ನು ತಂತಿ ಕೊಡಬೇಕೆಂದು ಕೇಳಿರುವನು.

ನನಗೆ ಬೇಕಾದಷ್ಟು ಬಿಡುವಿದ್ದುದರಿಂದ ಮುಂದಿನ ಸೋಮವಾರ ಅಲ್ಲಿ ಬಂದು ಸೇರುವೆನೆಂದು ತಂತಿ ಕೊಟ್ಟೆ.

* * * *

ಅಲ್ಲಿಗೆ ಸಾಯಂಕಾಲ ಸೇರಿದೆ. ಆತನು ಇಳಿಬಿಸಿಲಿ ನಲ್ಲಿ ಗುಡಿಸಿಲಿನ ಮುಂದೆ ಕುಳಿತಿದ್ದನು. ಕೈಯೆತ್ತ

ಲಾರದಿದ್ದನು. ಆದರೆ ಆ ವಿಲಕ್ಷಣ ಕಾಂತಿಯುಕ್ತವಾ
ಕಣ್ಣುಗಳು ಸ್ವಾಗತವನ್ನು ಬಯಸಿದುವು.

"ನೀವು ಬಂದುದು ನನ್ನ ಪುಣ್ಯ. ನನ್ನ ಸ್ನೇ
ತರು— ಆ ಪದವು ಸರಿಯೋ ಅಲ್ಲವೋ ಕಾಣೆ—ಎಲ್ಲರ
ವ್ಯಾಪಾರಿಗಳು. ಕಣ್ಣಿನಲ್ಲಿ ನೀರು ಕಿತ್ತುಕೊಳ್ಳುವವರೆ
ಮಾತನಾಡಿ ಬೇಜಾರು ಪಡಿಸುವರು. ಅಲ್ಲದೆ ಸ
ಸ್ಥಿತಿಯಲ್ಲಿ ಅವರೊಡನೆ ಮಾತನಾಡಲು ಇಷ್ಟವಿಲ್ಲ
ಎಂದು ಮೆಲ್ಲನೆ ಮಾತನಾಡಿದನು.

ಮೃತ್ಯುವಿನ ಆಗಮನವನ್ನೇ ಇದಿರು ನೋಡುತ್ತಿ
ಆತನು ತನ್ನ ಬಾಳನ್ನು ರಾಜಿಯಿಂದ ಸಾಮರಸ್ಯ
ಕೃತಿಮಾಡಿದ್ದನು ಹಿಂದೆ ಹಲವು ಸಮಯಗಳ
ಮೃತ್ಯುವನ್ನು ಭಯ, ಭಕ್ತಿ ಕುತೂಹಲಗಳಿಂದ ಕಾ
ವೆನೆಂದು ನುಡಿದಿದ್ದನು. ಸಂಪ್ರದಾಯದಂತೆ ಸಂತೈ
ಲೋಸುಗ, ಗುಣವಾಗಿ ನನ್ನೊಡನೆ ನಾಗರಿಕ ಪ್ರ
ಚಕ್ಕೆ ಬರುವವರೆಗೆ ಜೊತೆಯಲ್ಲಿರುವೆನೆಂದೆ. ಸುಮ್ಮ
ನಕ್ಕುಬಿಟ್ಟನು.

"ಹಿಂತಿರುಗುವುದಿಲ್ಲ. ಈ ಮುರುಕು ಎಲುಬಿನಿಂ
ಆವರಿಗೇನು ಉಪಯೋಗ! ಅದು ನನಗೂ ನಿಮಗ
ಸಂಬಂಧಿಸಿಲ್ಲ. ಈ ಸ್ಥಳವು ಸಾಯಲು ಯೋಗ್ಯವಿ
ಇಲ್ಲಿ ತತ್ವಜಿಜ್ಞಾಸುವಾಗಬಹುದು" ಎಂದನು.

ತನ್ನ ವಿಧಿಯೇ ತನಗೆ ಅವಿಚಾರಾಸ್ಪದವಾಗಿ ಕಂ
ಬಂದಾಗ ನನಗೆ ಆತನ ವಿಷಯದಲ್ಲಿ ಮರುಗುವುದು
ಕಷ್ಟವಾಯಿತು. ಪ್ರಪಂಚವು ಇನ್ನೂ ಆತನಿಗೆ ಹರ್ಷ
ಕುತೂಹಲ - ಭರಿತವಾಗಿತ್ತು. ತನ್ನ ವ್ಯಾಪಾರ

ಸಣ್ಣ ಪ್ರಪಂಚವಲ್ಲ. ಅವನ್ನು ಆಗಲೆ ತೃಣೀಕರಿಸಿದ್ದನು. ಆತನು ಚರ್ಚಿಸಬಯಸಿದುದು, ಭವಿಷ್ಯತ್ ಜನ್ಮ, ಅದರ ಸಮಸ್ಯೆಗಳು, ಅದರ ಸಾಧ್ಯಾಸಾಧ್ಯಗಳು, ಅದರ ನವನವೋನ್ಮೇಷವಾದ ಬೆಳವಣಿಗೆಗಳು-ಇವುಗಳನ್ನು. ಆ ಸ್ಥಿತಿಯಲ್ಲಿ ಆತನನ್ನು ಕಂಡವರು ನೂರು ಕಾಲವನ್ನು ಮುಂದಿಟ್ಟುಕೊಂಡಿರುವ ಯುವಕನೆಂದು ತಿಳಿಯುತ್ತಿದ್ದರು.

* * * *

ಒಂದು ಸಾಯಂಕಾಲ. ಕೊನೆಯ ಗಳಿಗೆ ಹತ್ತಿರವಾಗುತ್ತಿದ್ದಿತು. ಇಬ್ಬರೇ ಏಕಾಂತವಾಗಿದ್ದೆವು. ಗುಡಿಸಿಲಿನವನೂ ಅವನ ಮಡದಿಯೂ ಕೂಲಿಗೆ ಹೋಗಿದ್ದರು. ಗುಡ್ಡದ ನಿಸರ್ಗರಮಣೀಯತೆಯು ಉತ್ಸಾಹವನ್ನು ತುಂಬುತ್ತಿದ್ದಿತು. ಸೂರ್ಯಾಸ್ತದ ಹೊತ್ತಿಗೆ ಗುಡ್ಡದ ನೆರಳು ನಮ್ಮನ್ನು ನುಂಗಲು ಬರುವಂತೆ ಬರುತ್ತಿದ್ದಿತು. ಸುತ್ತ ಶಾಂತಿಯು ಕವಿಯಲಾರಂಭಿಸಿತು.

ನನ್ನಲ್ಲಿ ನಟ್ಟಿದ್ದ ಆತನ ಕಣ್ಣುಗಳಿಗೆ ಕ್ರಮೇಣ ಸೆರೆಯಾದೆ. ಉತ್ತರವಾಗಿ ನಾನೂ ನೋಡುತ್ತಿದ್ದೆ.

"ನಾವು ಪುನಃ ಸೇರುವೆವೆಂಬ ವಿಷಯವಲ್ಲಿ ಸಂಶಯಾಶ್ಚರ್ಯ. ಅದರಲ್ಲೂ ಒಬ್ಬರನ್ನೊಬ್ಬರು ನೆನೆಯುವೆವೆಂಬ ವಿಷಯದಲ್ಲಿ ಇನ್ನೂ ಹೆಚ್ಚು" ಎಂದನು.

ನನಗೆ ಬಿಡಿಸಲಾಗದ ಸಮಸ್ಯೆಯಾಯಿತು. ಹಾಗೆಯೇ ಮುಂದುವರಿದನು:

"ಈ ಕೆಲವು ದಿನಗಳಿಂದ ನನ್ನನ್ನು ಏನೋ ಬಾಧಿಸುತ್ತಿರುವುದು. ನಾನೂ ನೀವೂ ಹಡಗಿನಲ್ಲಿ ಮೊದಲು

ಸಂಧಿಸಿದಾಗ ಅಂಕುರವಾದುದು. ನಾವಿಬ್ಬರೂ ಸಹಾಧ್ಯಾಯಿಗಳು,—ಯಾವುದೋ—ಅರಿಯೆ,—ಇಬ್ಬರನ್ನೂ ಹತ್ತಿರ ಸೇರಿಸಿತು. ಇಬ್ಬರ ಮಧ್ಯೆ ಒಬ್ಬ ರಮಣಿ - ಅವರು ಅವಳನ್ನು ಸುಡುತ್ತಿದ್ದರು - ಕೊನೆಗೆ ಮಂದಿಯು ನೂಕುನುಗ್ಗಲು - ಹಠಾತ್ತಾಗಿ ಅಂಧಕಾರ - ನಮ್ಮಿಬ್ಬರ ದೃಷ್ಟಿ ಒಂದಾಗುವುದು.”

ಯಕ್ಷಿಣಿಯ ಹಿಡಿತದಲ್ಲಿದ್ದಂತಾಯಿತು. ಏಕೆನ್ನಲು, ಗಾರುಡಿಗನಂತೆ ಆತನು ಮಾತನಾಡುತ್ತಿರಲು, ಆತನ ಶೋಧಿಸುವ ಕಣ್ಣುಗಳಲ್ಲಿ ಬಂಧಿತನಾಗಿದ್ದೆ. ನನ್ನ ದೃಷ್ಟಿ ಪಥದಲ್ಲಿ ಕನಸೊಂದು ಬಿತ್ತು. ಇಕ್ಕಟ್ಟಾದ ಬೀದಿಯಲ್ಲಿ ವಿಜಾತೀಯ ಜನದ ಓಡಾಟ. ಹಿಂದೆ ಕಾಣದಿದ್ದ ವಿವಿಧ ವರ್ಣಗಳ ಮನೆಗಳು. ಪ್ರತಿಯೊಂದು ನೆರಳ ಹಿಂದೆಯೂ ನಿಂತು ಜುನುಗುತ್ತಿದ್ದ ಪ್ರೇತ ಸದೃಶವಾದ ಭಯ. ಪ್ರಯತ್ನಪಟ್ಟು ಮೈ ಒದರಿದೆ, ಕನಸಿನಿಂದ ಬಿಡುಗಡೆ ಕಾಣಲು.

“ಮೈಲಾಪುರದ ಅಂದಿನ ಸಾಯಂಕಾಲವನ್ನು ನೆನೆದಿರೊ?” ಎಂದೆ. ಅದಕ್ಕುತ್ತರವೀಯದೆ—

“ನನ್ನ ಚಿಕ್ಕಂದಿನಲ್ಲಿ ಒಂದು ವಿಚಿತ್ರ ಸಂಗತಿ ನಡೆಯಿತು. ನನಗಾಗ ಆರು ವರ್ಷಗಳು. ನನ್ನ ತಾಯಿ ತಂದೆಯರೊಂದಿಗೆ ಬಂಧುಗಳನ್ನು ನೋಡಿಕೊಂಡು ಬರಲು ಆನೆಗೊಂದಿಗೆ ಹೋಗಿದ್ದೆ. ಹಂಪೆಗೂ ಹೋದ ಹಾಗೆ ಜ್ಞಾಪಕ. ಅಲ್ಲಿನ ಒಂದು ದೇವಸ್ಥಾನಕ್ಕೆ ಹೊರಟೆವು. ಮಂಗಳಾರತಿಯಾಗುತ್ತಿದ್ದಾಗ ನಾನು ಅಲ್ಲಿದ್ದ ಒಂದು ಬಾಗಿಲನ್ನು ತಳ್ಳಿದೆ - ಬಾಗಿಲು ಹಾರ ತೆರೆದು

ಕೊಂಡಿತು. ಒಳಗೆ ಗವಿ, ಕಗ್ಗತ್ತಲು. ಸುತ್ತಲೂ ದಿಗ್ಭ್ರಾಂತನಾಗಿ ನೋಡಿದೆ. ನಮ್ಮವರು ನನ್ನ ಕಡೆಗೆ ಬೆನ್ನು ಮಾಡಿಕೊಂಡಿದ್ದರು. ಮುಂದೆ ಹೋಗಿ ಬಾಗಿಲು ಮುಚ್ಚಿಕೊಂಡೆ. ಅಲ್ಲಿನ ರಹಸ್ಯವೆಲ್ಲ ನನಗೆ ತಿಳಿ ದಂತಿದ್ದಿತು. ಸೋಪಾನವನ್ನಿಳಿದು ಸ್ಪರ್ಶದಿಂದ ಕಣ್ಣನ್ನು ಕತ್ತಲಿಗೆ ಒಗ್ಗಿಸಿಕೊಂಡು ಹೋಗಬೇಕಾಯಿತು. ಕೊನೆಗೆ ಇನ್ನೊಂದು ಬಾಗಿಲು ಸಿಕ್ಕಿತು. ಅದನ್ನು ತೆರೆ ಯಲು ಆಗಲಿಲ್ಲ. ಅದರ ಮುಂದೆ ಗುಂಡುಗಳ ರಾಸಿ ಯಿತ್ತು. ಎಲ್ಲಿ ಆ ಗುಂಡುಗಳುರುಳಿ ಸಿಕ್ಕಿಕೊಳ್ಳು ವೆನೋ ಎಂದು ಭಯಪಟ್ಟು ಹಿಂತಿರುಗಿದೆ. ದೇವಸ್ಥಾ ನವು ಶೂನ್ಯವಾಗಿದ್ದಿತು. ಹೊರಗೆ ಅವರೆಲ್ಲ ನನ್ನನ್ನು ಹುಡುಕುತ್ತಿದ್ದರು. ಪಡೆದ ಸಾಹಸಾನುಭವವನ್ನು ಅವರಿಗೆ ಹೇಳಲಿಲ್ಲ."

ಇನ್ನಾವಾಗಲಾದರೂ ಆತನು ಆ ಕತೆಯನ್ನು ಹೇಳಿ ದ್ದರೆ ನಕ್ಕು ಬಿಡುತ್ತಿದ್ದೆ. ಮುಂದೆ ಅದನ್ನು ನೆನೆದು ಬಾಲ ಚೇಷ್ಟೆಯೆಂದೂ, ಕೇವಲ ಕತೆಯೆಂದೂ ಎಣಿ ಸಿದೆ. ಆದರೆ ಆ ಸಮಯದಲ್ಲಿ ಆ ವಿಲಕ್ಷಣ ಕಣ್ಣುಗಳು ನನ್ನನ್ನು ಸೆರೆ ಹಿಡಿದಿದ್ದುವು. ಆತನ ಬಿಳುಪೇರಿದ ಮುಖವನ್ನು ಸುಮ್ಮನೆ ನೋಡುತ್ತಿದ್ದೆ. ಆ ಮುಖದ ಮೇಲೆ ಮೃತ್ಯುವಿನ ಗಭೀರ ಛಾಯೆ ಕ್ರಮೇಣ ಆವರಿ ಸುವಂತಿದ್ದಿತು.

ಆ ಕಣ್ಣುಗಳ ಮೂಲಕ ತನ್ನ ನೆನಪು ನನ್ನ ಹೃದ ಯದಲ್ಲಿ ಚಿರಸ್ಥಾಯಿಯಾಗಲೆಂದು ಆತನು ಎಣಿಸಿರ ಬೇಕು. ಆ ಮನುಷ್ಯ ಹೃದಯವೇ, ಆತನ ಆತ್ಮವೇ,

ಆ ಕಣ್ಣುಗಳಲ್ಲಿ ಹೆಪ್ಪುಗಟ್ಟಿದಂತಿದ್ದುವು. ಯಾವುದೋ ನಿರಾಕಾರವು, ಅಸ್ಪಷ್ಟ ಅವ್ಯಕ್ತತೆಯು ದರ್ಶಿಸುವಂತೆ ಭಾಸವಾಯಿತು. ಏನೋ ದೈಹಿಕವ್ಯಸನ, ನೋವಿನ ಚಿಮ್ಮು ತನ್ನ ಕಣ್ಣುಗಳನ್ನು ತಿರುಗಿಸುವಂತೆ ಮಾಡಲು, ನನಗೆ ಮಹಾಮುಕ್ತಿ ದೊರೆತಂತಾಯಿತು.

“ನಾನು ತೆರಳಿದ ಮೇಲೆ ನೀವೊಂದು ಕಾಗದವನ್ನು ಕಾಣುವಿರಿ” ಎಂದು ಕ್ಷಣಬಿಟ್ಟು ಮಾತನಾಡಿದನು. “ಎಲ್ಲಿ ನೀವು ತಡಮಾಡುವಿರೊ, ಆ ಹೊತ್ತಿಗೆ ಎಲ್ಲಿ ನನ್ನ ಶಕ್ತಿ ಕುಗ್ಗಿ ನುಡಿಯಲಾಗುವುದಿಲ್ಲವೊ ಎಂದಿದ್ದೆ. ವ್ಯಾಪಾರಕ್ಕೆ ಹೊರಗಾಗಿ ಇರುವ ಹಲವು ಗೆಳೆಯರಲ್ಲ ನೀವೊಬ್ಬರು ಮಾತ್ರ ರಹಸ್ಯ ವಿಷಯಗಳನ್ನು ತೇಲಿಸಿ ಬಿಡುವವರಲ್ಲವೆಂದು ನಾನು ಎಣಿಸಿಪೆ. ಸಕಲೇಂದ್ರಿಯ ಪಟುತ್ವದಿಂದ ನಾನು ಸಾಯುವೆನೆಂಬುದು ನನ್ನ ಹಿಗ್ಗಿನ ಸಂಗತಿ. ಬಾಳಿನಲ್ಲ ನಾನು ಹೆದರಿಮದು ಧೃತಿ ಲುಪ್ತವಾದ, ಕ್ಷಯಿಸುವ ಮುದಿತನ. ಮನೋದಾರ್ಢ್ಯ ವಿರುವಾಗಲೆ ಸಾಯುವೆನೆಂಬುದು ನನ್ನ ಅಚಲವಾದ ನಂಬುಗೆ. ಅಂಥ ಸಾವನ್ನು ಕರುಣಿಸೆಂದು ದೇವರನ್ನು ಸದಾ ಪ್ರಾರ್ಥಿಸಿದೆ.”

ಆತನು ಕಣ್ಣುಗಳನ್ನು ಮುಚ್ಚಿದನು. ನಿದ್ರಿಸು ತ್ತಿದ್ದನೆಂದು ಹೇಳಲಾರೆ; ಸ್ವಲ್ಪ ಹೊತ್ತಿಗೆ ಗುಡಿಸಿಲಿ ನವನು ಬಂದ. ಇಬ್ಬರೂ ಆತನನ್ನು ಹೊತ್ತುಕೊಂಡು ಪಡಸಾಲೆಗೆ ಹೋದೆವು. ಇನ್ನು ಹೆಚ್ಚು ಆತನಲ್ಲಿ ಸಂವಾದ ನಡೆಯಲಿಲ್ಲ. ಸದ್ಗ್ರಂಥವೊಂದನ್ನು ಓದಿಸಿ ಕೇಳಬೇಕೆಂದು ಇಷ್ಟವಾಯಿತು.. ನಾನು ಮೂರು

ದಿನಗಳು ಓದಿದೆ.

* * * *

ಆತನು ಹೇಳಿದ್ದ ಕಾಗದವನ್ನು ಕಂಡೆ. ಅದರ ಜೊತೆಗೆ ಬ್ಯಾಂಕಿನ ನೋಟುಗಳ ಕಡತವಿತ್ತು. ಅವನ್ನು ನನಗೆ ಕೊಟ್ಟಿರುವುದಾಗಿ ಬರೆದಿದ್ದನು. ಆದಷ್ಟು ಜಾಗ್ರತೆ ನೋಟುಗಳನ್ನು ಮುರಿಸಬೇಕೆಂದು ಹೇಳಿದ್ದನು. ಕಾಗದವು ಮುಂದುವರಿಯಿತು.

ಮನುಷ್ಯತ್ವ ಸಾಧಿತವಾಗಲು ಈ ಪ್ರಪಂಚವೊಂದು ವಿದ್ಯಾಪೀಠ. ಮನುಷ್ಯನಿಗೆ ಮುಖ್ಯವಾಗಿ ಬೇಕಾದುದು ಶಕ್ತಿ. ಧರ್ಮಾಚಾರಿಯೆಂದೂ, ಪುಣ್ಯಶೀಲನೆಂದೂ ಜನ ತನ್ನನ್ನು ತಿಳಿಯಬಹುದು. ಆದರೆ ಬ್ರಹ್ಮಜ್ಞಾನಿಯೆಂದು ಪರಿಗಣಿತನಾಗಲು ಇಷ್ಟಪಡುವವನು, ತಾನು ತನ್ನ ಜಯಿಸುವ ವಿದ್ರೋಹ ಮನಸ್ಸಿಗೆ ಅನುಸಾರವಾಗಿ ನಂಬಿಕೆಗಳನ್ನುಳ್ಳವನು. ದೇವರು ಸೇವೆಗಾಗಿ ನರನನ್ನು ನಿರ್ಮಿಸಿದನು. ಹೊಡೆದಾಟ ಬಡಿದಾಟಗಳಿಂದ ಶಕ್ತಿಗೊಳ್ಳಲೆಂದು, ಗಭೀರವೃತ್ತಿಗೆ, ವಿನಯಾರಂಭಗಳಿಗೆ, ಹಿರಿಯ ಎಡರುಗಳಿಗೆ ಎದೆಗೊಡಲೆಂದು ನರನಿಗೆ ದೇವರು ಜನ್ಮ ಜನ್ಮಗಳಲ್ಲಿಯೂ ಯುಗಯುಗಗಳಲ್ಲಿಯೂ ಜೀವನವೆರೆಯುತ್ತಿರುವುದು. ಕುಶಲ ಕರ್ಮದ ಕಿರೀಟವೇ ವಿಜಯವು. ಸೃಷ್ಟಿಯಲ್ಲಿ ನರನು ಮಹಾಸಾಧನೆಗಳಿಗೆಂದು ಎಣಿಸಬೇಕು. ಮಾನವತೆ ಹೇಗೆ ದಾಸ್ಯದಿಂದ ದರ್ಪಕ್ಕೇರಿತೆಂದು ಇತಿಹಾಸ ವರ್ಣಿಸುವುದು.

ನಮ್ಮಲ್ಲಿ ಅನೇಕರಿಗೆ ಹಲವು ವಿಚಿತ್ರ ಸಮಯಗಳಲ್ಲಿ

ದೂರದ ವಿಲಕ್ಷಣ ಪರಿಚಯದ ಆಲೋಚನೆಗಳು ಮನೋಗಮನಕ್ಕೆ ಬರುವುವೆಂದು ತೋರುತ್ತದೆ. ಅವೇನು ನೆನಪುಗಳೋ, ಕನಸುಗಳೋ ಅನ್ನಿಸುತ್ತವೆ. ನಾವು ವಯೋವೃದ್ಧರಾದಂತೆಲ್ಲ ವರ್ತಮಾನದ ಗಡಿ ಬಿಡಿಯು ಅವನ್ನು ತೃಣೀಕರಿಸಿ ನಮ್ಮ ಗಮನದಿಂದ ಅವನ್ನು ದೂರಮಾಡುತ್ತದೆ. ಯೌವನದಲ್ಲಿ ಅವು ಹೆಚ್ಚು ಹಠದಿಂದ ನಿಲ್ಲುವುವು. ಆದರೆ ತನ್ನಲ್ಲಿ ವಸ್ತುತಃ ಅವು ಬೆಳೆದಂತಿವೆ. ತನ್ನ ಈಚಿನ ಇರವು ವಿಶಾಲ ಗಗನದ ಅಡಿಯಲ್ಲಿ ಸಮಾಪ್ತಿಯಾದುದು ಮಹಾಕಾವ್ಯದ ಒಂದು ತರಂಗಮಾತ್ರ. ತಾನು ಮುಂದಿನ ತರಂಗಕ್ಕೆ ಎದುರು ನೋಡುತ್ತಿರುವವನು.

ಇನ್ನೊಂದನ್ನು ಆರಿಸಲು ತನಗೆ ಅಧಿಕಾರವುಂಟೆ, ಎಂದು ಆತನು ಕಾಗದದಲ್ಲಿ ಶಂಕಿಸಿರುವನು. ಹೇಗೂ ಫಲದಲ್ಲಿ ಕುತೂಹಲಿಯಾಗಿದ್ದನು. ಏನನ್ನು ಕಡುನೆಚ್ಚಿ ಮುಂಗಾಣುತ್ತಿದ್ದನೋ ಅವು ವಿಶಾಲವಾದ ಅನುಭವಗಳು, ಹೊಸ ಪ್ರಸಂಗಗಳು. ತಾನು ಅವನ್ನು ಸಾಧಿಸಿಕೊಳ್ಳುವ ಬಗೆ ಹೇಗೆ?

ಕಾಗದವು ವಿಚಿತ್ರ ಕೋರಿಕೆಯೊಡನೆ ಕೊನೆಗೊಂಡಿತು. ನನ್ನ ತಾಯ್ನಾಡಿಗೆ ನಾನು ಹಿಂತಿರುಗಿದಾಗ ತನ್ನನ್ನು ಸದಾ ನೆನೆಯುತ್ತಿರಬೇಕೆಂದು ಬಯಸಿದ್ದನು. ನನಗೆ ತಿಳಿದ ಸತ್ತ ಮನುಷ್ಯನನ್ನಲ್ಲ, ನನಗೆ ಪರಿಚಯವಾದ ಧ್ವನಿಯನ್ನಲ್ಲ, ತನ್ನ ಸಂವಾದದ ರೀತಿಯನ್ನಲ್ಲ—ಇವೆಲ್ಲ ಮಾನವನು ಸದಾ ಬದಲಾಯಿಸುವ ಬಟ್ಟೆಗಳಂತೆ—ಆದರೆ ಕೇವಲ ಮನುಷ್ಯನನ್ನು—

ಆತನ ಆತ್ಮವನ್ನು, ಯಾವುದು ಶೋಧಿಸಲು ಯತ್ನಿಸಿ, ವಿಜಯಿಯಾಗಿ ಸ್ವಯಂ ಪ್ರಕಾಶವಾಯಿತೋ ಆ ಆತ್ಮವನ್ನು.

ಕಾಗದಕ್ಕೆ ಹಿನ್ನುಡಿಯೊಂದಿದ್ದಿತು. ಓದಿದಾಗ ಅದಕ್ಕೆ ಬೆಲೆ ಕೊಡಲಿಲ್ಲ. ತಾನು ದೇಹವನ್ನು ನೀಗಿದ್ದ ಗುಡಿಸಿಲನ್ನು ಕ್ರಿಯಕ್ಕೆ ಪಡೆದಿದ್ದನು. ಕಳೇಬರವನ್ನು ಸಾಗಿಸಿದ ಮೇಲೆ ಎಂದಿಗೂ ಆ ಗುಡಿಸಿಲನ್ನು ಶೂನ್ಯವಾಗಿಟ್ಟಿರಬೇಕೆಂದು ಬಯಸಿದ್ದನು.

ಕಾಗದವನ್ನು ಮಡಿಸಿ ಇತರ ಕಾಗದಗಳೊಂದಿಗಿಟ್ಟೆ. ಗುಡಿಸಿಲೊಳಕ್ಕೆ ನುಗ್ಗಿ ಆ ಘನವಾದ, ಕಠಿನವಾದ ಮುಖದ ಕೊನೆಯ ದರ್ಶನವನ್ನು ಪಡೆದೆ. ಶಕ್ತಿಯ ಆದರ್ಶ ರಹಸ್ಯವನ್ನು ಕಲ್ಲಿನಲ್ಲಿ ಕಡೆಯಲು ಶಿಲ್ಪಿಗೆ ತಕ್ಕ ಮಾದರಿಯ ಮುಖ. ಮೃತ್ಯುವನ್ನು ಗೆದ್ದು ನಿದ್ರಿಸುವಂತೆ ಕಂಡನು.

ಆತನ ಕೋರಿಕೆಯನ್ನು ಈಡೇರಿಸಿದೆ. ಹಾಗೆಯೇ ಮಾಡಬೇಕಾಯಿತು. ಸದಾ ಆತನನ್ನೇ ಚಿಂತಿಸಿದುದು ಅದಕ್ಕೆ ಸಮಾಧಾನ.

*   *   *   *

ಒಂದು ಮಧ್ಯಾಹ್ನ. ಮಳೆ ಎಡೆಬಿಡದೆ ಸುರಿಯುತ್ತಿದ್ದಿತು. ಬೀಳುವ ಸಿಡಿಲನ್ನು ತಪ್ಪಿಸಿಕೊಳ್ಳಲು ಆಸರೆಯನ್ನು ಹುಡುಕಿಕೊಂಡು ಬೈಸಿಕಲ್ಲಿನ ಮೇಲೆ ವೇಗವಾಗಿ ಹೋಗುತ್ತಿದ್ದೆ. ನಮ್ಮೂರಿನ ತೇರುಬೀದಿ. ಹಾಗೆಯೇ ಹೋಗುತ್ತಿದ್ದವನು ಒಂದು ಏಕಾಂತ ಗೃಹದ ಬಳಿ ಇಳಿಯಲು, ಕಿಟಕಿಯಿಂದ ಹೊರಕ್ಕೆ ದೃಷ್ಟಿ ಸಾರಿದ್ದ ಒಂದು

ವ್ಯಕ್ತಿಯು ಬಾಗಿಲನ್ನು ತೆಗೆದು ಆದರಿಸಿತು. ಒಗೆದು ಚೆಲುವೆಮಾಡಿದ ಬಟ್ಟೆಗಳನ್ನು ಇಸ್ತ್ರಿಮಾಡಲು ಒಳಕ್ಕೆ ಹೊರಟಿತು. ನಾನು ಒಬ್ಬನೇ ಆಗಿ, ಕಿಟಕಿಯ ಬಳಿ ನಿಂತು ಸುರಿಯುತ್ತಿದ್ದ ಮಳೆಯನ್ನು ನಿಲ್ಲಬಾರದೆ, ಎನ್ನುತ್ತಿದ್ದೆ.

ಸ್ವಲ್ಪಹೊತ್ತಿನಮೇಲೆ ಅನಿರೀಕ್ಷಿತವಾಗಿಯೆ ಹಿಂದಕ್ಕೆ ತಿರುಗಲು ಕುರ್ಚಿಯ ಮೇಲೆ ಕುಳಿತ್ತಿದ್ದ ಮಗುವೊಂದು ಕಾಣಿಸಿತು. ತನ್ನ ಮುಂದೆ ಚಿತ್ರಗಳಿಡಿದ ಪುಸ್ತಕವಿದ್ದರೂ ಮಗು ನನ್ನನ್ನು ನೋಡುತ್ತಿದ್ದಿತು. ಒಳಗೆ ಇಸ್ತ್ರಿ ಮಾಡುವ ಸದ್ದು. ಹೊರಗೆ ಭೋರೆಂದು ಕರೆಯುವ ಮಳೆ. ಮಗು ವಿಶಾಲವಾದ ತನ್ನ ಕಣ್ಣುಗಳಲ್ಲಿ ಭೀಕರ ಕರುಣಾರಸವನ್ನು ತುಂಬಿಕೊಂಡು ನನ್ನನ್ನೇ ನೋಡು ತ್ತಿದ್ದಿತು. ಕುರೂಪಿ. ಅಲುಗಾಡಲಿಲ್ಲ. ಸದ್ದುಮಾಡ ಲಿಲ್ಲ. ಆದರೆ ವಿಲಕ್ಷಣ–ಆಶಾಭರಿತವಾದ ಕಣ್ಣುಗಳಲ್ಲಿ ಯಾವುದೋ ನನ್ನೊಡನೆ ನುಡಿಯಲು ಯತ್ನಿಸಿದಂತಿತ್ತು. ಕಣ್ಣಿಗೆ ಅಗೋಚರವಾಗಿ ಏನೋ ರೂಪುಗೊಳ್ಳುವಂತೆ ಭಾಸವಾಯಿತು. ಮಗುವಿಗೆ ಏನೋ ಅರೆಯಾಗಿದ್ದಂತೆ ಇತ್ತು. ನಿಸರ್ಗಸ್ಫೂರ್ತಿಯಿಂದ ಚಂಚಲನಾಗಿ ಮಗು ವಿನ ಬಳಿಗೆ ಸಾರಿದೆ. ಎತ್ತಿಕೊಂಡೆ. ಮಗು ಬಿಕ್ಕುತ್ತ ತನ್ನ ಸೊರಗಿದ ಕೈಗಳಿಂದ ಕೊರಳನ್ನು ಬಳಸಿ, ಅಪ್ಪಿ, ಕರುಣೆಮುಂಬಿ ಸಣ್ಣ ಅಳುವನ್ನು ಅತ್ತಿತು.

ಅಳುವನ್ನು ಕೇಳಿ ಇಸ್ತ್ರಿಮಾಡುತ್ತಿದ್ದ ವ್ಯಕ್ತಿ ಹೊರಕ್ಕೆ ಬಂದು ಮಗುವನ್ನು ಸಂತೈಸಿತು.

"ಅದಕ್ಕೆ ಈರೀತಿ ಸಂಕಟವು ಆಗಾಗ್ಗೆ ಸಂಭವಿಸು

ವುದು. ಈ ತೆರನ ಸಂಕಟಕ್ಕೆ ಸಿಕ್ಕಿದ ಹೊರತು, ಇತರ ಮಕ್ಕಳಂತೆ ಓಡಾಡಲು ಆಗುವುದಿಲ್ಲ” ಎಂದಿತು.

“ಏನಾದರೂ ವಿಪತ್ತು ಸಂಭವಿಸಿತೆ?” ಎಂದೆ.

“ಇಲ್ಲ, ತಂದೆ ದೇವರಂತಹ ಮನುಷ್ಯ. ಏನೋ ಗ್ರಹಚೇಷ್ಟೆಯಿರಬಹುದೆಂದು ಜನ ಹೇಳುವುದು. ನನಗೇನೂ ತೋಚುವುದಿಲ್ಲ. ನೋವಿಗೆ ಈಡಾಗದಿರುವಾಗಲೂ ಎಲ್ಲ ಮಕ್ಕಳಿಗಿಂತ ಮೇಧಾವಿ ಈ ಮಗು. ಚೆನ್ನಾಗಿ ಚಿತ್ರಗಳನ್ನು ಬರೆಯುತ್ತದೆ.”

ಮಳೆ ನಿಂತಿತು. ಅಳು ನಿಂತಿತು. ಹೊಸ ಚಿತ್ರ ಸಂಗ್ರಹವನ್ನು ತಂದುಕೊಡುವೆನೆಂದು ಹೇಳಲು ಮಗುವಿನ ಮುಖದ ಮೇಲೆ ಧನ್ಯತೆಯ ಸೋಗನ್ನು ಧರಿಸಿದ ನಗುವೊಂದು ಮಿಂಚಿ ಮಾಯವಾಯಿತು. ನುಡಿ ಮಾತ್ರವಿಲ್ಲ.

*   *   *   *

ಆಗಾಗ್ಗೆ ಮಗುವನ್ನು ಕಂಡು ಹೋಗುತ್ತಿದ್ದೆ. ಕೇವಲ ಕುತೂಹಲವು ನನ್ನನ್ನು ಹಾಗೆ ಮಾಡಿತ್ತು. ಬಳೆದಂತೆಲ್ಲ ಮಗು ದೃಢಕಾಯನಾದನು. ಮೊದಲನೆಯ ದಿನ ಅದನ್ನು ಕಂಡಾಗ ಹುಟ್ಟಿದ ಭ್ರಾಂತಿಯ ಕದಡು ತಿಳಿಯಾಗುತ್ತ ಬಂದಿತು. ಸತ್ತವನ ಮಾತಿನಲ್ಲಿ ಮಾತನಾಡಿದರೆ ಮಗುವಿನ ನೆನಪು ಸುಳಿಯುವುದೋ ಎಂದು ಯತ್ನಿಸಿದೆ. ಒಂದೆರಡು ಸಲ ಸರಸಕರುಣಾಪೂರಿತವಾದ ಕಣ್ಣುಗಳಲ್ಲಿ ಹಿಂದಿನ ಮುಖವನ್ನು ಕಂಡೆನಾದರೂ, ಗುಡ್ಡದ ಸುತ್ತಿನ ಶಾಂತಿಯಲ್ಲಿ ಲಯವಾದ ಆ ಪ್ರಬಲ ವಿಜಯಿ, ಧೃತಿವಂತನ ನೆನಪಿನೊಂದಿಗೆ ದುಃಖಪೂರ್ಣವಾದ ಈ ಸಣ್ಣ

ದೀನಮಾನವ ವಿಕಾರವನ್ನು ಸಮನ್ವಯ ಮಾಡಲಾರದೆ ಹೋದೆ.

ಆ ದುಃಖಜೀವಿಯನ್ನು ಹರ್ಷಪಡಿಸುತ್ತಿದ್ದುದು ತನ್ನ ಕಲೆ. ಆರೋಗ್ಯವೊಂದಿದ್ದರೆ ಕೀರ್ತಿಯನ್ನು ಗಳಿಸಬಹುದಾಗಿದ್ದಿತು. ಅವನ ಕಲೆಯು ಸ್ಫೂರ್ತಿವತ್ತಾಗಿದ್ದರೂ, ಚಮತ್ಕೃತಿಯಾಗಿದ್ದರೂ ಕುರೂಪಿಯ ವಿಫಲಸೃಷ್ಟಿ!

"ನಾನು ಎಂದಿಗೂ ಕೀರ್ತಿವಂತನಾಗಲಾರೆ. ನನಗೆ ಹಿರಿಯ ಕನಸುಗಳಿವೆ. ಆದರೆ ಅವನ್ನು ಕೃತಿಗಳಾಗಿ ಮಾಡುವಾಗ ಯಾವುದೋ ಪ್ರತಿಬಂಧಕವಾಗುತ್ತದೆ. ಓಟವನ್ನು ತಡೆದವ ಕೈ ಕೊನೆಯ ಸಮಯದಲ್ಲಾದರೂ ತನ್ನ ಬಲವಾದ ಪಟ್ಟನ್ನು ಬಿಡುವುದೆಂದು ಎಣಿಸುವೆನು. ಹಾರೈಸುವೆನು. ಅಯ್ಯೊ, ಆದರೆ ನನಗೆ ಶಕ್ತಿಯಿಲ್ಲ. ನಿಶ್ಯಕ್ತನಾಗಿರುವುದು ಮಾತ್ರ ತೀರ ಭೀಕರ ಸ್ಥಿತಿ."

ಕೊನೆಯ ವಾಕ್ಯ ನನ್ನಲ್ಲಿ ಸ್ಥಾಯಿಯಾಯಿತು. ಮನುಷ್ಯನಿಗೆ ತಾನು ನಿಶ್ಶಕ್ತನೆಂದು ಅರಿವಾಗುವುದು ವಿಪರೀತ ಸ್ಥಿತಿಯೆ! ಸಮಸ್ಯೆಯೆ! ಆದರೂ ಹಾಗೆ ತಿಳಿಯಬೇಕಾದರೆ ಮನುಷ್ಯನು ಶಕ್ತನಾಗಿರಬೇಕು. ಅವನ ತಾಳ್ಮೆಯನ್ನೆ, ಸರಳತೆಯನ್ನೆ ಚಿಂತಿಸುತ್ತ ನನಗೆ ಹಿನ್ನುಡಿಯ ಜ್ಞಾಪಕ ಬಂದಿತು. ಅದರ ರಹಸ್ಯಾರ್ಥವು ಬಯಲಾಯಿತು.

ಆಗ ಅವನಿಗೆ ಇಪ್ಪತ್ತನಾಲ್ಕು ವಯಸ್ಸು. ತಂದೆ ಸತ್ತಿದ್ದನು. ಅಲ್ಪ ಸಂಪಾದನೆಯಲ್ಲಿ ತಾನೂ ತನ್ನ ತಾಯಿಯೂ ಬದುಕಬೇಕಾಗಿದ್ದಿತು.

"ನನ್ನ ಜೊತೆಯಲ್ಲಿ ಬಂದು ಕೆಲವು ದಿನವಿರ

ಬಾರದೆ?" ಎಂದೆ.

ಈ ನನ್ನ ಸಹಾಯಕ್ಕೆ ಅವನನ್ನು ಒಪ್ಪಿಸಲು ಹೆಚ್ಚು ಪ್ರಯತ್ನ ಪಡಬೇಕಾಯಿತು. ಹಿಂತೆಗೆಯುವ ಧ್ವನಿಯಲ್ಲಿಯೂ ಒಂದು ಹೆಮ್ಮೆಯಿದ್ದಿತು. ಅವನ ಶಾರೀರಕ ದೃಷ್ಟಿಯಿಂದ ಪ್ರಯಾಣವು ಪ್ರಯಾಸವೇ ಆಗಿರಬೇಕು. ಏಕೆನಲು ಅವನ ಚಲನೆಗೆ ಸಂಕಟವೇ ಪ್ರೇರಕಶಕ್ತಿ. ಆದರೂ ಪ್ರಕೃತಿಯು ಚೇತನವನ್ನು ಕೊಟ್ಟಿತು. ಒಂದು ದಿನ ಬೆಳಗ್ಗೆ ದೂರದ ಬೆಟ್ಟಗಳನ್ನು ಕವಿದಿದ್ದ ಉಷೆಯು ಹೊಂಬೆಳಕನ್ನು ಕಾಣಿಸಿದಾಗ ಅವನ ಕಣ್ಣುಗಳಿಗೆ ಹೊಸ ಬೆಳಕು ಬಂದಿದ್ದಿತು.

ಮಧ್ಯಾಹ್ನ ಗುಡಿಸಿಲಿಗೆ ಬಂದೆವು. ಬೇಕಾದ ಸಲಕರಣೆಗಳನ್ನು ಅಣಿಮಾಡಲು ಏರ್ಪಡಿಸಿದ್ದೆ. ನಾನೇತಕ್ಕೆ ಅವನನ್ನು ಕರೆತಂದೆನೆಂದು ಹೇಳಲಿಲ್ಲ. ಬೇಕೆಂದೇ ಅವನನ್ನು ಒಂಟಿಯಾಗಿ ಬಿಟ್ಟು, ದೀರ್ಘಕಾಲ, ವಾಯುವಿಹಾರದ ನೆವ ಹೇಳಿ ಹೊರಟುಬಿಡುತ್ತಿದ್ದೆ. ನಾನು ಎಷ್ಟೇ ಹೊತ್ತಾಗಿ ಬಂದರೂ ತಾನು ಇನ್ನೂ ಒಂಟಿಯಾಗಿರಬೇಕೆಂಬ ಪ್ರವೃತ್ತಿ ಬೆಳೆಯಿತು.

ಒಮ್ಮೆ ಸಾಯಂಕಾಲ ಬಹುದೂರ ಹೋಗಿ, ನಡೆಗೆಟ್ಟು, ಕಂಗೆಟ್ಟು, ತೊಳಲಿ ಹಿಂತಿರುಗಿದಾಗ, ಅವನು ಗುಡಿಸಿಲಿನ ಹೊರಗೆ ತನ್ನ ಇಷ್ಟವಾದ ಜಾಗದಲ್ಲಿ ಕುಳಿತಿದ್ದನು. ಹಿಂತಿರುಗಿದುದು ಅಷ್ಟು ಹೊತ್ತಾದರೂ ಅದಕ್ಕೆ ಮುಂಚೆ ನಿರೀಕ್ಷಿಸಲಿಲ್ಲವೆಂಬಂತೆ ನಮಸ್ಕರಿಸಿದನು. ನನಗೆ ನಡೆಯುಲ್ಲಿ ಆದ ಮೋಸವನ್ನು ತಾನೇ ಹೇಳಿ ಚಿಂತಿಸಲಿಲ್ಲವೆಂದನು. "ನೀವೂ ನಾನೂ ಇದೇ ಸ್ಥಳದಲ್ಲಿ ಕುಳಿತು,

ವರ್ಷಗಳ ಹಿಂದೆ ಮಾತನಾಡಿದುದು ನಿಜವೆನ್ನುವಿರಾ?" ಎಂದನು.

"ನಾನು ಹೇಳಲಾರೆ. ಇಷ್ಟು ಹೇಳಬಲ್ಲೆ. ಆತನು ಇಲ್ಲಿ ಸತ್ತನು — ಸಾವೆಂಬುದು ನಿಜವಾದರೆ — ಆವರೆ ಇನ್ನಾರೂ ಇಲ್ಲಿ ಬಂದು ನೆಲಸಲಿಲ್ಲ. ನಾವು ಬರುವ ವರೆಗೆ ಇನ್ನಾರೂ ಬಾಗಿಲನ್ನು ಕೂಡ ತೆರೆದಂತೆ ಕಾಣೆ."

"ಈ ಕನಸುಗಳು ಸದಾ ನನ್ನೊಂದಿಗಿವೆ. ಅವನ್ನು ದೂಡಲು ಯತ್ನಿಸಿರುವೆನು. ಅವು ಅಷ್ಟು ಹಾಸ್ಯಾಸ್ಪದ ವಾಗಿ ಕಂಡುವು. ಈಗಲೊ ಹಣ, ಶಕ್ತಿ, ಜಯಗಳು ಲಭಿಸಿ ಬದುಕು ಸರಾಗವಾಯಿತು."

ಅವನು ತನ್ನ ಸಣ್ಣ ಕೈಗಳನ್ನು ನನ್ನ ಕೈಗಳಲ್ಲಿಟ್ಟನು. ಕಣ್ಣುಗಳು ಮಿಂಚಿದುವು. ಹರ್ಷದ, ಆಶೆಯ ಮುಖ ವಾಯಿತು.

"ನಾನು ತಿಳಿಯುವುದು ಹೀಗೆ. ನೀವು ನಗಬಹುದು. ಇಲ್ಲಿ ನನಗೊಂದು ಯೋಚನೆ ಮೂಡಿದೆ: ದೇವನೇ ನನಗೆ ಗುರುವಾದನೆಂದು. ಜಯವು ನನ್ನನ್ನು ಅಧೀರ ನನ್ನಾಗಿ ಮಾಡುತ್ತಿದ್ದಿತು. ನನಗೆ ನಿಶ್ಶಕ್ತಿಯನ್ನೂ ಸೋಲನ್ನೂ ಕೊಟ್ಟು ಶಕ್ತಿಯ ಮಹಿಮೆಯನ್ನು ಅರಿಯುವ ವಂತಾಯಿತು. **ಶಕ್ತಿವಂತನಾಗಿರುವುದೇ ಜೀವ ಜೀವಾಳ.**"



# ಡೊಂಕು ಬಾಲ



For the hearts that break in silence
With a sorrow all unknown,
For those who need companions,
Yet walk their ways alone.

—Ella Wheeler Wilcox.

ಹನ್ನೆರಡು ಘಂಟೆಯಾಯ್ತೋ ಇಲ್ಲವೋ, ಬಿನ್ನಿ ಮಿಲ್ಲು, ರಾಜಾಮಿಲ್ಲು, ಸೋಪ್‌ಫ್ಯಾಕ್ಟರಿ, ವರ್ಕ್‌ಷಾಪ್ ಇವೆಲ್ಲವುಗಳ 'ವಿಸಲ್ಲು'ಗಳು 'ಕುಯ್ಯೋ' ಅಂತ ಕೂಗಿದುವು. ಕೆಲಸಗಾರರು ಜೇಗ ಮನೆಗೆ ಹೋಗಿ ಬರಲು ಒಬ್ಬರಮೇಲೊಬ್ಬರು ಬೀಳೋದು ಏಳೋದು ಕಾಣದೆ ಕಾರ್ಖಾನೆಗಳ ಹೊರಗೆ ತಂಡತಂಡವಾಗಿ ಓಡುತ್ತಿದ್ದಾರೆ. ಇಂಥವರ ಮಧ್ಯೆ ಒಂದು ರಸ್ತೆಯಲ್ಲಿ ಕಿಟ್ಟೊ ತನ್ನ ಸೈಕಲ್ಲನ್ನು ತಳ್ಳಿಕೊಂಡು ಬಂದು ಸಿಕ್ಕಿಬಿಟ್ಟಿದ್ದಾನೆ. ಎರಡೂ ಕಡೆಗಳಲ್ಲಿ ಜನರಗುಂಪು ನುಗ್ಗಿಕೊಂಡು ಹೋಗುತ್ತಿದೆ. ಮೆಲ್ಲಗೇ ಹೋಗಬೇಕು. ವಿಧಿಯಿಲ್ಲ. 'ಈ ರಸ್ತೆಯಲ್ಲಿ ಏಕಪ್ಪಾ ಬಂದೇ' ಎಂದುಕೊಂಡ. ಹಿಂದಿನಿಂದ 'ಏನ್ರೀ ಕ್ರಿಷ್ಣರಾವ್, ನಡಕೊಂಡ್ಹೋಗ್ತಿದ್ದೀರಿ? ನೂನ್‌ವಾಕ್ (Noon walk) ಒಳ್ಳೇದೂಂತ್ಲೋ' ಎಂದು ಯಾರೋ ಕೇಳಿದರು. ಹಿಂದಿರುಗಿ ನೋಡಿ ನಗುತ್ತಾ 'ಬೈಸ್ಕಲ್ ಟ್ಯೂಬ್ ಎಲ್ಲೋ ಪಂಕ್ಚೇರಾಗಿದೇಂತ ಕಾಣುತ್ತೆ. ಗಾಳೀನೆ ಇಳಿದ್ಹೋಯ್ತು ಇಲ್ಲಿಗೆ ಬರೋ ಹೊತ್ತಿಗೆ ಸರಿಯಾಗಿ. ಹಾಳು ಈ ಗಲಾಟೇಲಿ ಸಿಕ್ಕಿಬಿದ್ದೆ. ಆಚೆ ರಸ್ತೇಲಿ ಹೋಗಬೇಕಿತ್ತು. ಏನು ಮಾಡೋದು' ಎಂದುತ್ತರ ಕೊಟ್ಟ. ಅವರು 'ಹೋಗಲಿ ಬಿಡಿ ಇವತ್ತೇನು ಶನಿವಾರ. ಮಧ್ಯಾಹ್ನ ರಜವಿದೆ' ಎಂದರು. ಅಲ್ಲಿಂದ ಇಬ್ಬರೂ ಮಾತನಾಡುತ್ತ ಒಂದಿಗೇ ಹೊರಟರು. ಆಫೀಸಿಗೂ ಕಿಟ್ಟೊ ಮನೆಗೂ ಬಹಳ

ದೂರ. ಸಾಲದ್ದಕ್ಕೆ ಉರಿಬಿಸಿಲು. ಹಸಿದ ಹೊಟ್ಟೆ. ಸೈಕಲ್ಲೂ ಕೂಡ ಇವತ್ತು ಅವನಿಗೆ ಕೈಕೊಡಬೇಕೆ?

ಕಿಟ್ಟು ಮನೆ ಮುಟ್ಟಿ ಬಾಗಿಲನ್ನು ತಟ್ಟಿದ. ಕೂಡಲೆ ಒಬ್ಬ ಹತ್ತು ವರ್ಷದ ಹುಡುಗನೊಬ್ಬನು ಬಾಗಿಲು ತೆರೆದು ಸೈಕಲ್ಲನ್ನು ಹೊತ್ತುಕೊಂಡು ಹೋಗಿ ಒಳಗಿಟ್ಟ. ಕಿಟ್ಟು ತನ್ನ ಕೋಣೆಯೊಳಗೆ ಹೋದ್ದೇ ತಡ ಕೋಟು, ಷರಾಯಿಗಳನ್ನು ಕಿತ್ತೊಗೆದ. ಬಚ್ಚಲುಮನೆಗೆ ಹೋಗಿ ಕೈ, ಕಾಲು, ಮುಖವನ್ನು ತೊಳೆದುಕೊಂಡು ಊಟದ ಮನೆಗೆ ಹೋದ. ಏಕೋ ಮನಸ್ಸು ಒಂದು ವಿಧವಾಯ್ತು. ಅಲ್ಲಿ ದಿನವೂ ಪದ್ಧತಿಯಂತೆ ಒಂದೆಡೆಯಲ್ಲಿ ಮುದುಡಿಕೊಂಡು ಅವನಿಗಾಗಿ ಕಾಯುತ್ತ ಬಿದ್ದಿರುತ್ತಿದ್ದ ಒಂದು ಪ್ರಾಣಿ ಕಾಣಿಸಲಿಲ್ಲ. ಅಡಿಗೆಮನೆಯಲ್ಲಿ ನುಗ್ಗಿ ನೋಡಿದ. ಅಲ್ಲಿಯೂ ಇರಲಿಲ್ಲ. ಪುನಃ ಊಟದಮನೆಗೇ ಹಿಂತಿರುಗಿದ. ಒಂದು ಪಕ್ಕದಲ್ಲೇನೋ ಒಂದು ಎಲೆ, ಅದರ ಹಿಂದೆ ಒಂದು ಕಾಲುಮಣೆ, ಅವರ ಮೇಲೊಂದು ಕಾಗದದ ಮೇಲೆ ಒಂದು ಸೌಟು. ಎಲೆಯ ಎದುರಿನಲ್ಲಿ ಅನ್ನ, ಹುಳಿ, ಸಾರು, ಪಲ್ಯಗಳು ಅದರದರ ಪಾತ್ರೆಗಳಲ್ಲಿದ್ದು, ಮೇಲೆ ಮುಚ್ಚಲ್ಪಟ್ಟಿದ್ದುವು. ಕೋಣೆಯ ಇನ್ನೊಂದು ಪಕ್ಕದ ಗೋಡೆಯಲ್ಲಿ ಒಂದು ಗೂಡು. ಅದರಲ್ಲಿ ಅಡಿಕೆ ವೀಳ್ಯದೆಲೆ, ಸುಣ್ಣ, ಒಂದು ಚೂರು ಕೊಬರಿ, ಇನಿಷ್ಟೂ ಇದ್ದ ಒಂದು ತಟ್ಟೆಯಿತ್ತು. ಮೇಲೆ ಎರಡು ಗಳಗಳು ಕಟ್ಟಿದ್ದು, ಅವುಗಳಲ್ಲಿ ಒಂದರ ಮೇಲೆ ಮಾತ್ರ ಒಂದು 'ಆನಂದಾಕಲರ್' ಸೀರೆ ಆರಿಹಾಕಿತ್ತು. ಕಿಟ್ಟುವಿನ ಕಣ್ಣುಗಳು ಇವೆಲ್ಲದರ ಮೇಲೂ ಒಂದು

ಬಾರಿ ಹಾಡು ಹಿಂತಿರುಗಿ ಕಾಲುಮಣೆಗೂ ಸೌಟಿಗೂ ಮಧ್ಯೆ ಸಿಕ್ಕಿಬಿದ್ದಿದ್ದ ಕಾಗದದ ಮೇಲೆ ನಿಂತಿತು. ಕಾಗದವನ್ನು ತೆಗೆದುಕೊಂಡು ನೋಡಿದ. ಅದರಲ್ಲಿ :—

............ರಿಗೆ.

ಬಸವನಗುಡಿಯಿಂದ ೧೧ ಘಂಟೆಗೆ ರಾಮು ಬಂದು, ನಮ್ಮ ತಾಯಿಗೆ ನಿನ್ನೆ ರಾತ್ರಿಯಿಂದ ಬಹಳ ಜ್ವರವೆಂದು ಹೇಳಿದ. ಅವರು ನನ್ನ ನೋಡಬೇಕೂಂದರಂತೆ. ಕರೆದುಕೊಂಡು ಹೋಗೋಕೆ ಬಂದಿದ್ದ. ನಿಮಗೆ ಹೇಳಿಕಳು ಹಿಸಿದನಂತೆ. ನಾನೂ ಹೇಳಿಕಳಿಸಬೇಕೂಂತಿದ್ದೆ. ಅವಸರ ಮಾಡಿದ. ಹೊರಟಿದ್ದೇನೆ. ಬೇಗ ಊಟಮಾಡಿ ಬಿಡಿ. ಇಲ್ಲದಿದ್ದರೆ ಎಲ್ಲಾ ಆರಿಹೋಗುತ್ತೆ. ತುಪ್ಪ ಒಲೇಮೇಲಿಟ್ಟಿದೀನಿ. ಮೊಸರು ನೆಲುವಿನಲ್ಲಿದೆ. ಊಟವಾದ ಮೇಲೆ ಅವನ್ನೂ, ತುಪ್ಪಾನೂ, ಎರಡೂ ನೆಲುವಿನಲ್ಲೇ ಇಟ್ಟುಬಿಡಿ. ಇಲ್ಲದಿದ್ದರೆ ಎಲ್ಲಾ ಬೆಕ್ಕಿನಪಾಲು. ಅಡಿಕೆಲೆ ಗೂಡಿನಲ್ಲಿಟ್ಟಿದ್ದೀನಿ. ರಾತ್ರೀಗೆ ಅಲ್ಲಿಗೇ ಊಟಕ್ಕೆ ಬನ್ನಿ. ಮೊಸರು ಮರೀಬೇಡೀ, ಮರೀಬೇಡೀ....ಮರೀಬೇಡಿ, ಮೂರು ಸಲ ಹೇಳಿದ್ದೀನಿ.

....ಸರಸೂ.

P. S.—ಮರೆತಿದ್ದೆ. ಊಟವಾದ ಮೇಲೆ ಸೌಟು ನೀರಿನಲ್ಲಿ ಹಾಕಿಟ್ಟುಬಿಡಿ. ತೊಳೆಯೋದು ಸುಲಭ. ಇಲ್ಲದಿದ್ದರೆ ತೊಳೆಯೋಕೆ ಹಿಂಸೆ ಆಗುತ್ತೆ.—

ಎಂದಿದ್ದಿತು. ಕಿಟ್ಟುವು ಓದಿಕೊಂಡು ಕೋಪದಿಂದ ಅತ್ತೆಯನ್ನೂ, ಭಾವಮೈದುನನನ್ನೂ ಮನಸ್ಸಿನಲ್ಲೇ ಬೈದುಕೊಳ್ಳುತ್ತಾ, ಆ ಕಾಗದವನ್ನು ಹರಿದುಬಿಸುಟು,

ಕುಳಿತು ತಾನೇ ಬಡಿಸಿಕೊಂಡು ಊಟ ಪ್ರಾರಂಭಿಸಿದ. ಊಟಮಾಡಲು ಮನಸ್ಸೇ ಆಗದು. ಒಬ್ಬನೇ ಕುಳಿತು ತಿನ್ನಬೇಕು. ಇಷ್ಟುದಿನವೂ ಸರಸಿಯು ಜೊತೆಗಿದ್ದಳು. ಈಗಿಲ್ಲದ್ದು ಊಟ ಬೇಕಾಗಲಿಲ್ಲ. ಆದರೇನು ಮಾಡೋದು ಹಸಿವೊಂದುಕಡೆ ಹೊಟ್ಟೆಯನ್ನು ಹಿಂಡುತ್ತಿತ್ತು.

ಹಾಗೆಯೇ ಒಂದು ತುತ್ತು ಬಾಯಿಗೆ ಹಾಕಿಕೊಳ್ಳು ವಾಗ ತಲೆಯನ್ನು ಮೇಲಕ್ಕೆತ್ತುತ್ತಲೇ, ಆ 'ಆನಂದಾ ಕಲರ್' ಸೀರೆ, ಮೇಲೆ ಕಾಣಿಸಿತು. ಅವಳು ತಾನೇ ಇಷ್ಟಪಟ್ಟು ಆರಿಸಿಕೊಂಡಿದ್ದ ಸೀರೆ. ಅವಳಿಗದರ ಮೇಲೆ ಬಹಳ ಪ್ರೀತಿ. ಅದು ನಿಜವಾಗಿಯೂ ಸರಸಿಗೆ ಒಪ್ಪುತಿತ್ತೆನಿಸಿತು ಮನಸ್ಸಿಗೆ. ಬಾಯಲ್ಲಿ ಹಾಕಿಕೊಂಡ ತುತ್ತು ಗಂಟಲಿಗಿಳಿದು 'ಶಿವನ ಕಂಠದಲ್ಲಿ ನಿಂತ ವಿಷ ದಂತೆ' ಅಲ್ಲಿಯೇ ನಿಂತಿತು. ಮುಖವು ಕೆಂಪೇರಿತು. ಕಣ್ಣಿನಲ್ಲಿ ನೀರುಕ್ಕಿತು. ಎರಡು ಮೂರಾವರ್ತಿ ಕೆಮ್ಮಿದ. ಬಾಯಲ್ಲಿದ್ದ ಅನ್ನವೆಲ್ಲ ಹೊರಹೊರಟು ಮುಂದಿನ ನೆಲ ವನ್ನೆಲ್ಲಾ ಅದೇ ಆವರಿಸಿಕೊಂಡಿತು. ಒಂದೆರಡು ಅಗ ಳುಗಳು ಗಾಬರಿಗೊಂಡು, ಬೇಗ ಮೂಗಿನ ಮಾರ್ಗವಾಗೂ ಹೊರಕ್ಕೆ ಬಂದುವು. ಇಷ್ಟೂ ಆ 'ಆನಂದಾ ಕಲರ್' ಸೀರೆಯಿಂದ ಆದ್ದು. ಅದನ್ನಷ್ಟು ಬೈದು ಸ್ವಲ್ಪ ಸುದಾ ರಿಸಿಕೊಂಡು ಪುನಃ ಊಟ ಷುರುಮಾಡಿದ. ಹಾಗೆಯೇ ಕಾಗದವು ನೆನಪಿಗೆ ಬಂತು.

'ಸರಸಿಯುದೆಷ್ಟು ಸರಳ ಹೃದಯ. ಹೋಗುವ ಮುಂಚೆ ತನಗೆ ಬೇಕಾಗುವ ಎಲ್ಲ ಪದಾರ್ಥಗಳನ್ನೂ ಸಜ್ಜುಗೊಳಿಸಿಟ್ಟು ಹೋಗಿದಾಳಲ್ಲ. ಬೇಗ ಊಟಮಾಡಿ

ಎಂದು ಬರೆದಿದ್ದಳು. ನಾನೆಲ್ಲಿ ಆರಿದ್ದನ್ನು ಊಟಮಾಡು ವೆನೋ ಎಂದು ಅವಳಿಗೆ ಚಿಂತೆ. ನನ್ನ ರಾತ್ರಿಯ ಊಟದ ವ್ಯವಸ್ಥೆಯನ್ನು ಮಾಡಿದ್ದಾಳೆ. ಅಲ್ಲಿಗೇ ಬರ ಬೇಕಂತೆ. ಅಲ್ಲಿಗೇಂದರೆ ಅವರ ತಾಯಿಾ ಮನೇಗೇಂತ ಅವಳ ಅಭಿಪ್ರಾಯ' ಎಂದು ಮನಸ್ಸಿನಲ್ಲೇ ಯೋಚಿ ಸುತ್ತ, ಊಟವೇನೋ ತಕ್ಕಮಟ್ಟಿಗೆ ಸ್ವಲ್ಪ ಪಟ್ಟಾಗೇ ಹೊಡೆದ. ಅದೇನು ಸರಸಿಯಿಲ್ಲದ ದುಃಖದ ಊಟವೋ ಅಥವಾ ಅಡಿಗೆಯೇ ಹಾಗಿತ್ತೋ ಅವನೇ ಹೇಳಬೇಕು.

ಊಟ ಮುಗಿದು ಕೈತೊಳೆದಮೇಲೆ ಅಡಿಕೆಲೆಯ ತಟ್ಟೆ ಯನ್ನು ತೆಗೆದುಕೊಂಡು ಕೋಣೆಗೆ ಹೋಗಿ 'ಈಸೀ ಛೇರಿ'ನ ಮೇಲೆ ಕುಳಿತ. ದಿನವೂ ಎಲೆ ಮಡಿಸಿ ಕೊಡು ತ್ತಿದ್ದ, ಸರಸಿಯಿಲ್ಲವಲ್ಲ ಇಂದು, ಎಂದು ಅನ್ನಿಸಿತು. ಸರಿ! ಪ್ರಾರಂಭ ಮನಸ್ಸಿನಲ್ಲೇ ತರ್ಕಕ್ಕೆ!

'ಈ ಒಂದು ವರ್ಷದಲ್ಲಿ ಸರಸಿಯನ್ನಗಲಿದ್ದುದು ಇದೇ ಮೊದಲಲ್ಲವೇ? = ಹೌದು.'

'ನಾನೀಗ ಸಂತೋಷದಿಂದಿದ್ದೇನೆಯೆ? = ಇಲ್ಲಾ.'

'ಆದ್ದರಿಂದ ನನಗೆ ಸರಸಿಯು ಬೇಕು. ಸರಸಿಗೆ ನಾನು ಬೇಕು. ಆಗ ಇಬ್ಬರೂ ಸಂತೋಷದಿಂದಿರು ತ್ತೇವೆ.'

'ಅಲ್ಲಾ! ಈಗ ಸರಸಿಯು ಇಲ್ಲದಿರುವುದು ನನಗೆಷ್ಟು ಬೇಸರವಾಗಿದೆ. ನಾನಿಲ್ಲದಿರುವಾಗ ಅವಳಿಗೂ ಹಾಗೇ ತಾನೇ? = ಹೌದೂ.'

'ಅದಕ್ಕೇನು ಮಾಡುವುದು. ಹಗಲೆಲ್ಲಾ ಅವಳ ಸಂಗಡವಿರಲು ಹೇಗೆ ಸಾಧ್ಯ, ಆಫೀಸಿರಲು? = ಅದಕ್ಕೆ

ಆಫೀಸಿನಿಂದ ಬಂದಮೇಲೆ ಅವಳೊಡನೆ ಇದ್ದು ವಿನೋದ ವಾಗಿ ಕಾಲ ಕಳೆಯಬೇಕು.'

'ಸರಿ! ಈಗ ನಾನು ಹಾಗೆ ಮಾಡುತ್ತಿದ್ದೇನೆಯೇ? = ಇಲ್ಲಾ, ಆಫೀಸಿನಿಂದ ಬರುತ್ತಲೂ ಕ್ಲಬ್ಬಿಗೆ ಹೊರಟು ಬಿಡುತ್ತಿದ್ದೇನೆ.'

'ಪಾಪ! ಸರಸಿಗೆ ಮೂರುಹೊತ್ತೂ ಮನೆಯಲ್ಲಿದ್ದು ಎಷ್ಟು ಬೇಸರವಾಗಿರಬೇಕು. ಹಾಳು! ಇವೆಲ್ಲಾ ನನಗೆ ಮೊದಲೇ ಹೊಳೆಯಬಾರದಿತ್ತೇ? ಆಗಲಿ—ಅವಳು ಬರು ತ್ತಲೂ ಅವಳ ಮುಂದೆ ನನ್ನ ತಪ್ಪನ್ನೊಪ್ಪಿಕೊಂಡು, ಇನ್ನುಮುಂದೆ ಹೀಗಾಗದಂತೆ ನೋಡಿಕೊಳ್ಳುತ್ತೇನೆ.... ಸರಸಿಯು ಬರಲಿ....ಪಾಪ! ಅವಳದೆಂತಹ ಸಂಕೋಚ ಪ್ರಕೃತಿ? ಒಂದು ದಿನವಾದರೂ 'ನಾನಿಂಥಾದ್ದು ನೋಡಬೇಕು. ಅಲ್ಲಿಗೆ ಕರೆದುಕೊಂಡು ಹೋಗಿ' ಎಂದು ಕೇಳಲಿಲ್ಲವಲ್ಲಾ....ಛೆ! ಅವಳನ್ನು ಹೀಗೆ ನಾನು ಮನೆಯಲ್ಲೇ ಕೊಳೆಹಾಕುವುದು ಸರಿಯಲ್ಲ. ನಾನು ಕ್ಲಬ್ಬಿಗೆ ಈ ಹೊತ್ತಿನಿಂದ ನನ್ನ ಜನ್ಮವಿರುವವರೆವಿಗೂ ಹೋಗುವುದಿಲ್ಲ. ಅದರ ಬದಲು ಸರಸಿಯನ್ನು ದಿನವೂ ಸ್ವಲ್ಪ ಹೊರಗೆ ಕರೆದುಕೊಂಡು ಹೋಗುತ್ತೇನೆ. ಈ ನಿಮಿಷದಿಂದ ನಾನು ಹೊಸ ಮನುಷ್ಯ....ಸರಸಿಯು ಬರಲಿ'—ಎಂದು ಯೋಚಿಸುತ್ತಿದ್ದ....ನಿದ್ದೆ ಬಂತು.

ಅವನು ಏಳುವ ವೇಳೆಗೆ ಐದೂಕಾಲು ಘಂಟೆಯಾ ಗಿತ್ತು. ಎದ್ದು ಮುಖತೊಳೆದು ಕೋಣೆಗೆ ಬಂದು ಬಟ್ಟೆಹಾಕಿಕೊಳ್ಳುತ್ತಾ 'ಬಸವನಗುಡಿಗೆ ಹೋಗಿ ಸರಸಿ ಯನ್ನು ಕರೆದುಕೊಂಡು ಹಾಗೇ ಹತ್ತಿರದಲ್ಲೇ ಇರುವ

ಲಾಲ್‌ಬಾಗಿಗೆ ಹೋಗಿ ಎಲ್ಲವನ್ನೂ ತೋರಿಸಿ, ಅಲ್ಲಿಂದ 'ಸಿನಿಮಾ'ಕ್ಕೆ ಹೋಗಲೇಬೇಕು' ಎಂದು ನಿರ್ಧರಿಸುತ್ತಾ ಕಾಲಿಗೆ 'ಬೂಟ್ಸ್' ಹಾಕಿಕೊಳ್ಳುತ್ತಿದ್ದ. ಅಷ್ಟರಲ್ಲಿ ಕೋಣೆಯೊಳಕ್ಕೆ ಸರಸಿಯೇ ಕಾಫಿ ತೆಗೆದುಕೊಂಡು ಬಂದಳು.

ಕಿಟ್ಟು ಆಶ್ಚರ್ಯದಿಂದ 'ಇದೇನೂ?' ಎಂದ. ಅದಕ್ಕೆ ಸರಸಿಯು—

"....ಅಯ್ಯೋ! ನಮ್ತಾಯೀಗೆ ಜ್ವರವೂ ಇರಲಿಲ್ಲ, ಏನೂ ಇರಲಿಲ್ಲಾಂದ್ರೆ—ನಾನ್ಹೋದಾಗ. ರಾಮು ಸುಮ್ಮನೇನೆ ಹೆದರಿಸಿಬಿಟ್ಟ. ಡಾಕ್ಟರು ಬಂದು ಕೈ ನೋಡಿ ಔಷಧೀಗೆ ಬರೆದುಕೊಟ್ಟು ಭಯವೇನೂ ಇಲ್ಲಾಂತ ಹೇಳಿದರು. ನಾನು ಎರಡು ಘಂಟೇವರ್ಗೂ ಅಲ್ಲೇ ಇದ್ದೆ, ಬೇಜಾರಾಯ್ತು, ಆಮೇಲೆ ಇವತ್ತು ಮಧ್ಯಾಹ್ನ ನಿಮಗೆ ರಜ ಇರೋದು ಜ್ಞಾಪಕಕ್ಕೆ ಬಂತು. ಅಲ್ಲಿರೋಕೇ ಮನಸ್ಸು ಬರಲಿಲ್ಲ. ರಾಮೂಗೆ ಹೇಳಿದೆ. ಗಾಡೀಲಿ ಕರ್ಕೊಂಬಂದುಬಿಟ್ಟ, ನೀವು ಮಲಗಿದ್ದಿರಿ. ಅವನು ಹಾಗೆಯೇ ಹೊರಟುಹೋದ" ಎಂದು ಹೇಳಿ ನಕ್ಕಳು. ಕಿಟ್ಟು 'ಹೂ' ಗುಟ್ಟುತ್ತ ಕಾಫಿ ಮುಗಿಸಿದ. 'ಬೂಟ್ಸ್' ಹಾಕಿಕೊಂಡಾಗಿತ್ತು. ಅವನೂ ನಕ್ಕು ತಲೇಗೆ 'ಹ್ಯಾಟ್' ತಗಲ್ಹಾಕಿಕ್ಕೊಂಡು 'ಟೆನ್ನಿಸ್ ರ್‍ಯಾಕೆಟ್' ಹಿಡಿದು ಹೊರಟ. ಸರಸಿಯು ನಗುತ್ತಲೇ 'ಎಲ್ಲಿಗೇ?' ಎಂದಳು. ಕಿಟ್ಟು 'ಕ್ಲಬ್ಬಿಗೆ' ಎಂದು ಹೇಳಿ—, ಹೊರಟೇಬಿಟ್ಟ.

ಸರಸಿಯು ಅವನು ಕಣ್ಮರೆಯಾಗುವವರೆಗೂ ಅವ

ನನ್ನೇ ನೋಡುತ್ತಿದ್ದು, ಆಮೇಲೆ ಒಂದು ನಿಟ್ಟುಸಿರು ಬಿಟ್ಟು ಹಿಂತಿರುಗಿದಳು. ಕಣ್ಣುಗಳಲ್ಲಿ ಒಂದು ಕ್ಷಣಕ್ಕೆ—ಹಿಂದೆ—ಇದ್ದ ಮಿಂಚು ಹೋಗಿ ದೈನ್ಯತೆಯು ಬಂದಿತು. ಒಂದು ತೊಟ್ಟು ಮುತ್ತಿನಂತಹ ಕಣ್ಣೀರು ಸುರಿದು ಅವಳ ಕೆನ್ನೆಯ ಮೇಲೆ ಹರಿದುಹೋಯಿತು. ಕೂಡಲೇ ಅವಳದನ್ನು ಒರೆಸಿಕೊಂಡು ತನ್ನ ಮನೆಗೆಲಸಗಳಲ್ಲಿ ಮುಳುಗಿದಳು.

* * * *

ಡೊಂಕುಬಾಲವು ಎಷ್ಟಾದರೂ ಡೊಂಕೇ!!.



# ನಾದನಾಮಕ್ರಿಯಾ



Now softly - softly as the murmur of whispered words, - now loudly, loudly as the crash of falling, now loudly and softly together, - like pearls and pearlets falling together on a marble dish......And then like the torrent stilled by the grip of frost, so, for a moment the music was luiled in a passion too deep for sound......Then as bursts the water from a broken vase......

—Po Chiu.

ರಾಕಾಚಂದ್ರನನ್ನು ನಗುತ್ತಿರುವ ಮುಖ; ಕುಟಿಲವಾಗಿ ಹಣೆಯಮೇಲೆ ಸುಳಿದು ಅಲೆಯಲೆಯಾಗಿ ಹಿಂದೆ ಜಗುಳಿರುವ ಭೃಂಗನೀಲಕೇಶರಾಶಿ; ನಸು ಕೊಂಕಿರುವ ಕೊರಳು; ಸ್ವಲ್ಪ ಉನ್ನತವಾದ ವಕ್ಷಃಸ್ಥಳ; ನೀಲಿ ಜರತಾರಿಯ ಸೀರೆಯ ಮೇಲೆ, ವಜ್ರ ವೈಡೂರ್ಯಗಳು ಮೆಟ್ಟಿರುವ ಚಿನ್ನದ ಡಾಬು; ನಿರಿನಿರಿಯಾಗಿ ಕಾಲ ಬಳಿ ಚಿಮ್ಮುವ ಅಂಚು; ತುಂಬು ಮೈ; ಬಣ್ಣನೆಗೆ ನಿಲುಕದ ನಿಲುವು. ಅಂಥ ಮುದ್ದಾದ ಮುಖದಲ್ಲಿಯೂ ಯಾವುದೋ ಶೋಕದ ಛಾಯೆ.

ಶ್ರೀನಿವಾಸಯ್ಯನು ಮೂಕನಾಗಿ ಅಚಲನಾಗಿ ನೋಡುತ್ತಿದ್ದನು. ದೇವಿ ನಗುತ ನಗುತ ಬಳಿಸಾರಿದಳು. ಅವನ ಕಣ್ಣುಗಳು ಅವಳನ್ನು ಹೀರಿಕೊಳ್ಳುತ್ತಿದ್ದುವು; ಮನಸ್ಸು ಉದ್ವೇಗಗೊಂಡಿತ್ತು; ಮುಖದಲ್ಲಿ ಕಾತರತೆ ಕೆತ್ತಿತ್ತು. ಆವೇಶದಿಂದ ಎದ್ದು ನಿಂತನು. ಅವನ ತಪಸ್ಸು ಸಿದ್ಧಿಸಿದಂತಿತ್ತು; ಭಾವಗಳು ಸಹಸ್ರ ಸಹಸ್ರಗಳಾಗಿ ಮಿಂಚುತ್ತಿದ್ದುವು; ಅಲಭ್ಯ ಅಮೂರ್ತಗಳು ಲಭ್ಯ ಮೂರ್ತಗಳಾದಂತಿದ್ದಿತು.

ಕೈಚಾಚಿದಂತೆ ಒಂದು ಹೆಜ್ಜೆ ಮುಂದಿಟ್ಟನು. ಥಳ್ಳನೆ ಮಿಂಚೊಂದು ಸುಳಿದು ಹೋಯಿತು. ಅವನ ಬಯಕೆಯ ದೇವಿ ಬಳಿಯಲ್ಲಿರಲಿಲ್ಲ. ಅವನು ಮಾತ್ರ ಕೆಳಗೆ ಕೂತು ಪಿಟೀಲಿನ ಮೇಲೆ ಕಮಾನು ಹಾಕುತ್ತ ಕಂಬನಿ ಸುರಿಸುತ್ತಿದ್ದನು. ಅದೆಂಥ ಮಧುರ ಯಾತನೆ. ಮಾನ

ವೀಯತೆಯ ಹಿಡಿತಕ್ಕೆ ಸಿಲುಕದೆ, ಉಗ್ರ ತಪಸ್ಸಾಗಿ ಸಾಧನೆಗೆ ಮಾತ್ರ ಲಭ್ಯವಾಗಿ, ಅಪೂರ್ವ ವಿಲಾಸ ಖೇದ ಗಳನ್ನುಂಟುಮಾಡುವ ಯಾತನೆ. ಶ್ರೀನಿವಾಸಯ್ಯನಿಗೆ ಅದರ ಪೂರ್ಣ ಪರಿಚಯವಿತ್ತು. ತನ್ನ ಬಾಳಿನಲ್ಲಿ ಸೇರಿ, ಈಗ ಒಂದು ಕ್ಷಣದ ಹಿಂದೆ ಮೈದೋರಿ, ಖೇದ ಪೂರ್ಣವಾದರೂ ಮಧುರವಾದ ಆ ವಿಲಕ್ಷಣ 'ಶಕ್ತಿ' ಯನ್ನು—ಪಿಟೀಲಿನಲ್ಲಿ ಐಕ್ಯವಾದ ಆ ರೂಪವನ್ನು— ಒಂದೊಂದು ಎಳೆತದಲ್ಲಿ, ಒಂದೊಂದು ಆಲಾಪನೆಯಲ್ಲಿ, ಒಂದೊಂದು ಶಯ್ಯೆಯಲ್ಲಿ ಹೊರಗೆಳೆಯುತ್ತಿದ್ದನು. ನಾದನಾಮಕ್ರಿಯಾ ರಾಗಾಧಿದೇವಿ ಅಂದು ಅವನ ಪಿಟೀ ಲಿನಲ್ಲಿ ಖೇದಳಾಗಿ, ಅಪೂರ್ವ ಶೋಭಾಯಮಾನಳಾಗಿ ನುಡಿಯುತ್ತಿದ್ದಳು.

*                    *                    *                    *

ಪಿಟೀಲು ಶ್ರೀನಿವಾಸಯ್ಯನ ಹೆಸರನ್ನು ಕೇಳದವರಿಲ್ಲ; ಅವನ ವಿದ್ವತ್ತಿನ ಪ್ರಶಂಸೆಗೆ ತಲೆದೂಗದವರಿಲ್ಲ; ಅವ ನಿದ್ದ ಸ್ಥಳಕ್ಕೆ ಯಾತ್ರೆ ಬರದವರಿಲ್ಲ. ಆದರೆ ಅವನು ಮಾತ್ರ ಎಲ್ಲರಿಗೂ ಅಗಮ್ಯನೆ; ಎಲ್ಲರಿಗೂ ಅಪೂರ್ವನೆ. ಅವನನ್ನು ನೋಡಲು ಬಂದು, ಸಾಧ್ಯವಾಗದೆ ಹಿಂತಿರು ಗುತ್ತಿದ್ದವರು ಎಷ್ಟೋ ಮಂದಿ. ಅವನ ಪಿಟೀಲಿನ ಒಂದು ಪಲುಕಿಗೆ ಸಾವಿರವಾಗಿ ಹಣ ಸುರಿಯಲು ಸಿದ್ಧ ರಾಗಿದ್ದವರು ಎಷ್ಟೋ ಜನ. ಆದರೆ ಶ್ರೀನಿವಾಸಯ್ಯ ನಿಗೆ ಮಾತ್ರ ಏನೂ ಬೇಕಾಗಿರಲಿಲ್ಲ.

ಶ್ರೀನಿವಾಸಯ್ಯನ ವಯಸ್ಸು ಮೂವತ್ತರೊಳಗೆ. ತೆಳ್ಳ ನೆಯ ಮಟ್ಟಸತರವಾದ ಎಣ್ಣೆಗೆಂಪಿನ ಮೈ; ತೇಜೋ

ಯುಕ್ತವಾದ ಮುಖ—ಕಣ್ಣು. ಆ ಕಣ್ಣಿನಲ್ಲಿ ಯಾವಾಗಲೂ ಚಿಂತೆಯ ಭಾವ ರೂಪುಗೊಂಡಿರುವುದು. ವಿಶಾಲವಾದ ಹಣೆಯಲ್ಲಿ ದೊಡ್ಡ ಕುಂಕುಮದ ಬೊಟ್ಟು. ಸಾಮಾನ್ಯವಾಗಿ ಮನುಷ್ಯ ಅಶಕ್ತನೆಂದು ಹೇಳಬಹುದು. ಯಾವುದೋ ಚಿಂತೆಯಿಂದ ಕುಗ್ಗಿದವನೆಂದು ಹೇಳಬಹುದು.

ಶ್ರೀನಿವಾಸಯ್ಯನಿಗೆ ಚಿಂತೆಯಿಲ್ಲದೆ ಇರಲಿಲ್ಲ. ಬಾಲ್ಯದಲ್ಲಿ ತಾಯಿತಂದೆಗಳನ್ನು ಕಳೆದುಕೊಂಡು ಅಣ್ಣನ ಆಶ್ರಯದಲ್ಲಿ ಬಳೆದಿದ್ದನು. ಅಣ್ಣನು ಇವನನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ನೋಡಿಕೊಳ್ಳುತ್ತಿದ್ದನು. ಆದರೆ ಶ್ರೀನಿವಾಸಯ್ಯನಿಗೆ ತಾನು ತಬ್ಬಲಿಯೆಂಬ ಅರಿವು ಪೂರ್ಣವಾಗಿತ್ತು. ಅಣ್ಣನ ಆಶೆಯಂತೆ ವಯಸ್ಸಿನಲ್ಲಿ ಮುದ್ದು ಹೆಂಡತಿಯನ್ನು ಹೊಂದಿ ಒಂದು ಅಪೂರ್ವ ಸುಖವನ್ನು ಅನುಭವಿಸಿದ್ದನು. ಆ ಸುಖ ನಾಲ್ಕು ವರುಷಗಳ ಹಿಂದೆ ಕೊನೆಗಂಡಿತ್ತು. ಮೈದೋರಿಮಾಯವಾಗುವ ಬಿರುಗನಸಿನಂತೆ ಅಳಸಿಹೋಗಿತ್ತು. ಅವನಿಗೆ ಈ ಲೋಕದಲ್ಲಿ ಒಬ್ಬಳೇ ಆದ ಮುದ್ದು ಲಲಿತ ಐಹಿಕ ವ್ಯಾಪಾರಗಳನ್ನು ತೊರೆದು—ಅವನನ್ನು ಎದುರಿಸಲಸಾಧ್ಯವಾದ ದಾರುಣವೇದನೆಗೆ ಗುರಿಮಾಡಿ—ಮುಗಿದುಹೋಗಿದ್ದಳು. ಅದು ಅವನನ್ನು ಕತ್ತರಿಸಿಬಿಟ್ಟಿತು. ಹಗಲಿರುಳೆನ್ನದೆ ಬಾಳನ್ನು ಕೊರೆಯುತ್ತಿತ್ತು. ಹೆಂಡತಿಯ ಗುಣರೂಪಗಳ ನೆನಹು ಅವನನ್ನು ನಿಮಿಷನಿಮಿಷವೂ ದಹಿಸುತ್ತಿತ್ತು. ಆ ವ್ಯಥೆಯಲ್ಲಿ, ಉಗ್ರವೇದನೆಯಲ್ಲಿ ಶ್ರೀನಿವಾಸಯ್ಯನು ತತ್ತರಿಸುತ್ತಿದ್ದನು.

ಅಂದಿನಿಂದ ಅವನಿಗೆ ವಿರಕ್ತಿ. ಲೋಕದ ವಿಚಾರ
ಲ್ಲಿ, ಅದರ ವ್ಯಾಪಾರಗಳಲ್ಲಿ ಭೀಷಣ ಜಿಹಾಸೆ. ಅಣ್ಣನ
ಶ್ರಯವನ್ನು ನೀಗಿ ತಾನೊಬ್ಬನೇ ಆದನು. ಅವನ
ತ್ರಿಯೆಲ್ಲ, ಮಾತುಕತೆಗಳೆಲ್ಲ, ಆ ಪಿಟೀಲಿನೊಡನೆ.
ಕಳ ವರುಷಗಳ ಹಿಂದೆ ತನ್ನ ಬಾಳಿಗೆ ಅಂಟಿಬಂದು
ಧ್ಯ ಸ್ವಲ್ಪಕಾಲ ದೂರವಾಗಿದ್ದ ಅದು, ಇಂದು ಆಪ್ತ
ತ್ರನಂತಾಯಿತು. ಅದಲ್ಲದೆ ಅವನವರಾಗಿ ಲೋಕ
ಯಾರೂ ಇಲ್ಲ. ತನ್ನ ಬಾಳು ಮುರಿದ ಬಾಳು;
ಹೀಗೆಯೇ ಕೊನೆಗಾಣಲಿ ಎಂದು ಅವನು
ರ್ಮಾನಿಸಿದ್ದನು; ಏಕಾಂತಜೀವನಕ್ಕೆ ಹಾತೊರೆಯು
ದ್ದನು.

ಶ್ರೀನಿವಾಸಯ್ಯ ಪಿಟೀಲನ್ನು ಯಾವ ಗುರುವಿನ ಬಳಿ
ಲ್ಲೂ ಅಭ್ಯಾಸಮಾಡಲಿಲ್ಲ. ತನ್ನ ತಂದೆ ಬಹಳ
ದೆ ಪಿಟೀಲು ಬಾರಿಸಿದ್ದನ್ನು ಒಂದೆರಡು ಸಲ ನೋಡಿ
ನು. ಅವರ ಬಳಿಯಲ್ಲಿ ಕೆಲವು ವಿಚಾರಗಳನ್ನು
ನನ ಮಾಡಿದ್ದನು. ಅಷ್ಟೆ. ಹೆಚ್ಚಾಗಿ ಅವನಿಗೆ
ಾವ ಪಾಠವೂ ಇಲ್ಲ. ಶೋಕ ಅವನ ಬಾಳಿನಲ್ಲಿ
ಲಿಟ್ಟ ಮೇಲೆ—ಲಲಿತ ಮುಗಿದು ಹೋದ ಮೇಲೆ—
ನ ಕಲೆ ಒಂದು ದಾರಿಯನ್ನು ಹಿಡಿದಿತ್ತು. ಮೃದು
ದ ದುಃಖಪೂರ್ಣವಾದ ರಾಗಗಳು ಅವನ ಪಿಟೀಲಿ
ನುಡಿಯುತ್ತಿದ್ದಂತೆ ಎಂಥ ವಿದ್ವಾಂಸನ ಸಾಧನೆ
ಲ್ಲೂ ನುಡಿಯುತ್ತಿರಲಿಲ್ಲ. ಅವನ ಬಾಳು ಅಷ್ಟು
ಣ್ಣಾಗಿತ್ತು. ಅದರ ಛಾಯೆ ಸಂಪೂರ್ಣವಾಗಿ ಪಿಟೀ
ಮೇಲೆ ಬಿದ್ದಿತ್ತು. ರಾಗಾಭಿಮಾನಿದೇವಿ ಅವನವ

ಳಾಗಿ ಅವನ ಜೀವನದಲ್ಲಿ ಮರುಕ ತೋರಿ ಅವನಲ್ಲಿ ನೆಲೆಸಿದ್ದಳು. ಅಂತೆಯೇ ಅವನ ಬಾರಿಸುವಿಕೆಯಲ್ಲಿ ಸಂಪೂರ್ಣತೆಯಿತ್ತು; ದಿವ್ಯತೆಯಿತ್ತು; ಭಾವವಿತ್ತು.

ಶ್ರೀನಿವಾಸಯ್ಯನು ಎಲ್ಲ ರಾಗಗಳನ್ನೂ ಅಪೂರ್ವ ಮನೋಹರವಾಗಿ ನುಡಿಯಿಸುತ್ತಿದ್ದರೂ ನಾದನಾಮ ಕ್ರಿಯಾ ರಾಗದಲ್ಲಿ ಮಾತ್ರ ಅವನಿಗೆ ಪೂರ್ಣ ವಿಶ್ವಾಸ ಸ್ವಾಮ್ಯಗಳಿದ್ದುವು. ಆ ರಾಗ ಅವನಿಗೆ ತಪಸ್ಸಿನಂತೆ ಸಿದ್ಧಿಸಿತ್ತು. ಅದರ ಅಭಿಮಾನಿ ದೇವಿ ದರ್ಶನವಿತ್ತಿದ್ದಳು. ಕರುಳು ಕಿತ್ತು ತರುವ ಅದರ ವ್ಯಾಪ್ತಿಯಲ್ಲಿ ಅವನು ಐಕ್ಯನಾಗಿದ್ದನು. ಅವನ ಬಾಳಿನ ಶೋಕ ಸಂಕಟಗಳು ರಾಗದ ಒಂದೊಂದು ಅಲೆಯಲ್ಲಿಯೂ ಅಡಗಿದ್ದುವು; ಒಂದೊಂದು ಸಂಚಾರದಲ್ಲಿಯೂ ಮೂರ್ತಿಗೊಂಡಿದ್ದುವು; ಭಾವಪೂರ್ಣವಾಗಿದ್ದುವು. ಅದೆಂಥ ಕರುಳು ಕೊಯ್ಯುವ ಸುಖ! ಆ ಮಧುರಯಾತನೆ ಶ್ರೀನಿವಾಸಯ್ಯನಿಗೆ ದಾರುಣವಾಗಿದ್ದರೂ ಬೇಕಾಗಿತ್ತು. ಅದು ಅವನ ಜೀವನದ ಒಂದು ಅನಿರ್ವಚನೀಯ ಅವಸ್ಥೆ.

ಆದರೆ ಶ್ರೀನಿವಾಸಯ್ಯನಿಗೆ ಒಂದು ದೌರ್ಬಲ್ಯವಿತ್ತು. ಅದನ್ನು ದೌರ್ಬಲ್ಯವೆನ್ನಲಾಗದಿದ್ದರೂ ಅವನು ಅದನ್ನು ಹಾಗೆಂದೇ ತಿಳಿದಿದ್ದನು. ಆ ರಾಗವನ್ನು ಅವನು ಎಂದೂ ಪೂರ್ಣವಾಗಿ ಬಾರಿಸಿದವನಲ್ಲ. ಬಾರಿಸುವುದಕ್ಕೆ ಆಗುತ್ತಿರಲಿಲ್ಲವೆಂದಲ್ಲ. ಬಾರಿಸುವುದರಲ್ಲಿ ದಿವ್ಯತೆಯಿತ್ತು, ರಸವಿತ್ತು. ಆದರೆ ತನ್ನ ಶಕ್ತಿಯನ್ನು ಆ ರಾಗದಲ್ಲಿ ಪೂರ್ಣವಾಗಿ ತಾನೇ ಕಂಡಿರಲಿಲ್ಲ. ಕಾಣ

ಬೇಕೆನ್ನುವ ಕುತೂಹಲವಿದ್ದರೂ ಒಂದು ಆಲಾಪನೆ ನುಡಿದರೆ ಅವನಿಗೆ ಕ್ರೂರ ವೇದನೆಯಾಗುತ್ತಿತ್ತು. ಹೃದಯದಲ್ಲಿ ಹುದುಗಿದ್ದ ವ್ಯಸನ, ರಾಗದಲ್ಲಿ ರೂಪು ತಳೆಯುತ್ತಿತ್ತು. ಯಾವುದೋ ದುರ್ಧರವಾದ ಶಕ್ತಿ ಮೇಲಿನಿಂದ ಅದುಮುತ್ತಿತ್ತು. ಆ ಶಕ್ತಿಗೆ, ಆ ಅದ್ಭುತ ಅವ್ಯಕ್ತತೆಗೆ, ಮಾನವನು ಹಿಮ್ಮೆಟ್ಟಲೇ ಬೇಕು. ಅದರ ಪೂರ್ಣಭಾವವನ್ನು ವ್ಯಕ್ತಗೊಳಿಸಬೇಕೆಂಬ ಅಪೇಕ್ಷೆ ಕುತೂಹಲಗಳಿದ್ದರೂ, ಅವನ್ನು ಸಹಿಸಿಕೊಂಡು ನಡುಗಿ, "ಈಗ ಬೇಡ; ಈಗ ಬೇಡ" ಎಂದುಕೊಳ್ಳುತ್ತಿದ್ದನು. ಅದನ್ನು ತಡೆಯುವುದು ಭೀಮ ಸಾಹಸವೆಂದು ಅವನ ಭಾವನೆ.

*    *    *    *

ಒಂದು ಕಛೇರಿಯನ್ನು ತಮ್ಮ ಊರಿನಲ್ಲಿ ನಡೆಯಿಸ ಬೇಕೆಂದು ನಗರದವರು ಹತ್ತಾರು ಸಲ ಶ್ರೀನಿವಾಸಯ್ಯ ನನ್ನು ಪ್ರಾರ್ಥಿಸಿದ್ದರು. ಆದರೆ ಅವನು ಎಲ್ಲ ಪ್ರಾರ್ಥ ನೆಗಳನ್ನೂ ನಿರಾಕರಿಸಿದ್ದನು. "ನನ್ನ ಕಛೇರಿಯಿಂದ ಸುಖವಿಲ್ಲ. ನಾನಂಥ ವಿದ್ವಾಂಸನೆ?" ಎಂದು ಜನ ರನ್ನು ಅನೇಕ ವೇಳೆ ಕೇಳಿದ್ದನು. ಅವನು ತಪ್ಪಿಸಿ ಕೊಳ್ಳಲು ಪ್ರಯತ್ನಿಸಿದಷ್ಟೂ ಪ್ರಾರ್ಥನೆಗಳು ಅಧಿಕ ವಾದುವು. ದಿನ ದಿನವೂ ಊರಿನವರ ಬಲವಂತ ಶ್ರೀನಿ ವಾಸಯ್ಯನಿಗೆ ಹೆಚ್ಚಾಯಿತು. ಕೊನೆಗೆ ತನ್ನ ಕೊಠಡಿ ಯಲ್ಲೇ ನಾಲ್ಕು ಕೃತಿಗಳನ್ನು ನುಡಿಯಿಸುವುದಾಗಿ ಹೇಳಿದನು. ಅವರು ಒಪ್ಪಲಿಲ್ಲ. ದೊಡ್ಡ ಕಛೇರಿಗೆ ಶ್ರೀನಿವಾಸಯ್ಯನು ನಿರ್ವಾಹವಿಲ್ಲದೆ ಸಮ್ಮತಿಸಬೇಕಾ

ಯಿತು. ಕಷ್ಟದಿಂದ ಒಪ್ಪಿಕೊಂಡನು.

* * * *

ನಗರದ ಸಭಾಂಗಣದಲ್ಲಿ ಎಳ್ಳು ಹಾಕಿದರೆ ಸಿಡಿಯುವಂಥ ಜನಸಂದಣಿ. ಶ್ರೀನಿವಾಸಯ್ಯನ 'ತನಿ'ಯನ್ನು ಕೇಳುವುದಕ್ಕೆ ಜನ ಸುತ್ತ ಊರುಗಳಿಂದ ಬಂದಿದಾರೆ. ಕಛೇರಿ ಸಂಜೆ ಐದು ಘಂಟೆಯ ವೇಳೆಗೆ ಪ್ರಾರಂಭವಾಗಬೇಕೆಂದು ಗೊತ್ತಾಗಿದೆ. ಮುಖ್ಯ ಮುಖ್ಯ ಜನರು ಮುಂದುಗಡೆಯ ಸ್ಥಳಗಳನ್ನು ಆಕ್ರಮಿಸಿ ಕೂತಿದಾರೆ. ಶ್ರೀನಿವಾಸಯ್ಯನಿಗೆ ಮಾತ್ರ ಸಭಾಂಗಣದ ಮಧ್ಯದಲ್ಲಿ ಒಂದು ಎತ್ತರವಾದ ವೇದಿಕೆ ಸಿದ್ಧವಾಗಿವೆ. ಅದರ ಮೇಲೆ ಶ್ರುತಿ ಮಾಡಿಟ್ಟ ತಂಬೂರಿಯನ್ನು ಮಂದರದಲ್ಲಿ ಆಡಿಸುತ್ತ ಒಬ್ಬನು ಕೂತಿದಾನೆ. ಜನ ಸಂತೆಯಂತೆ ಸೇರಿದೆ.

ಐದು ಘಂಟೆಗೆ ಸ್ವಲ್ಪ ಹೊತ್ತು ಇದೆ ಎನ್ನುವ ವೇಳೆಗೆ ಶ್ರೀನಿವಾಸಯ್ಯನನ್ನು ಕರೆದುಕೊಂಡು ನಗರದ ಮುಖ್ಯಸ್ಥರು ಬಂದರು. ಸದ್ದು ನಿಮಿಷಮಾತ್ರದಲ್ಲಿ ಅಡಗಿಹೋಯಿತು. ಎಲ್ಲ ಕಣ್ಣುಗಳೂ ಕುತೂಹಲದಿಂದ ಶ್ರೀನಿವಾಸಯ್ಯನ ಕಡೆಗೆ ತಿರುಗಿದುವು. ಅದೇ ಶಾಂತ ಮುಖ; ಅದೇ ಕಣ್ಣುಗಳು. ಆದರೆ ಇಂದು ಆ ಕಣ್ಣುಗಳಲ್ಲಿ ಗಾಢವಾದ ತೇಜಸ್ಸಿನ ಛಾಯೆಯಿದೆ; ಹಣೆಯಲ್ಲಿ ಕುಂಕುಮ ರಾಗವಾಗಿದೆ; ಕಂಕುಳಲ್ಲಿ ಪಿಟೀಲಿನ ಪೆಟ್ಟಿಗೆ ಕೂತಿದೆ.

ಶ್ರೀನಿವಾಸಯ್ಯನು ಜನರ ಇಚ್ಛೆಯಂತೆ ವೇದಿಕೆಯನ್ನೇರಿ ಕೂತನು. ಪಕ್ಕದಲ್ಲಿ ತಂಬೂರಿ ಅವಿಚ್ಛಿನ್ನ

ವಾಗಿ ನುಡಿಯುತ್ತಿತ್ತು. ಬಲಗಡೆಯ ಪಾರ್ಶ್ವದಲ್ಲಿ ಮೃದಂಗದ ಮೇಲೆ ಚಾಪು ಹಾಕುತ್ತ ಶ್ರೀನಿವಾಸಯ್ಯ ನನ್ನೇ ಎವೆಯಿಕ್ಕದೆ ನೋಡುತ್ತ ಒಬ್ಬನು ಕೂತಿದ್ದನು. ತಂಬೂರಿಯ, ಅದರ ಶ್ರುತಿಗೆ ಹೊಂದಿಕೊಂಡು ವಾದ ನಕ್ಕೆ ಸಿದ್ಧವಾಗಿದ್ದ ಮೃದಂಗದ ಶಬ್ದಗಳಲ್ಲದೆ, ಸಭಾಂ ಗಣದಲ್ಲಿ ಬೇರೆ ಯಾವ ಸದ್ದೂ ಇಲ್ಲ. ಶ್ರೀನಿವಾಸ ಯ್ಯನು ಸುತ್ತ ನೋಡಿದನು. ಒಂದು ನಿಮಿಷ ಕಣ್ಣು ಮುಚ್ಚಿ ಮತ್ತೆ ತೆರೆದನು. ಪೆಟ್ಟಿಗೆ ತೆರೆದು ಪಿಟೀಲನ್ನು ಹೊರಗೆಳೆದುಕೊಂಡನು. ಸ್ವಲ್ಪ ಹೊತ್ತು ದಿಟ್ಟಿಯನ್ನು ಅದರಲ್ಲಿ ಕೀಲಿಸಿ ಮೃದುವಾಗಿ ಸುಯ್ದು ಕಮಾನನ್ನು ಕೈಗೆತ್ತಿಕೊಂಡನು. ಪಕ್ಕದಲ್ಲಿದ್ದವರು ಕಿವಿಯಲ್ಲಿ ಏನೋ ಪಿಸುಗುಟ್ಟಿದರು. ಶ್ರೀನಿವಾಸಯ್ಯನ ಮುಖ ಗಂಭೀ ರವಾಯಿತು. ಕಮಾನು ಮೆಲ್ಲನೆ ತಂತಿಗಳ ಮೇಲೆ ಸಂಚರಿಸತೊಡಗಿತು. ಸುತ್ತ ನಿಶ್ಶಬ್ದವಾಗಿತ್ತು. ಧ್ವನಿ ಅಲೆಯಲೆಯಾಗಿ ಕಮನೀಯಮಧುರವಾಗಿ ಚಿಮ್ಮತೊಡ ಗಿತು. ಅಂದೊಂದು ಭೈರವಿ ವರ್ಣ.

ಕೂತ ಜನ ಚಿತ್ರಾರ್ಪಿತ ಪ್ರತಿಮೆಗಳಂತಿದ್ದರು. ಉಸಿರು ಹಿಡಿದು ಹಿಡಿದು ಬಿಡುತ್ತಿದ್ದರು. ಶ್ರೀನಿವಾಸ ಯ್ಯನ ಶಾಂತನಿರ್ಮಲ ಮುಖದಲ್ಲಿ ಯಾವ ಭಾವವೂ ವ್ಯಕ್ತವಾಗಿರಲಿಲ್ಲ. ಯಾವ ಚಿಂತೆಯ ಸುಳಿವೂ ಇರ ಲಿಲ್ಲ. ಹಣೆಯ ಮೇಲೆ ಅಲ್ಲೊಂದು ಇಲ್ಲೊಂದು ಬೆವರು ಹನಿಗಳು ಕಾಣುತ್ತಿದ್ದುವು.

ವರ್ಣವಾಯಿತು. ಕೃತಿಗಳು ಒಂದೆರಡು ಮುಗಿ ದುವು. ವಿವಿಧ ರಾಗಗಳ—ಸಾವೇರಿಯ, ಪೂರ್ವಿಯ,

ಕಾನಡದ, ತೋಡಿಯ,—ಆಲಾಪನೆಗಳು ನುಡಿದು ಎಲ್ಲರ ಕಣ್ಣುಗಳನ್ನೂ ಹನಿಗೂಡಿಸಿಬಿಟ್ಟುವು. ಎಲ್ಲ ರಾಗಗಳಲ್ಲಿಯೂ ಒಂದೇ ಬಗೆಯ ಪ್ರತಿಭೆ; ತೇಜಸ್ಸು; ಗೂಢವಾಗಿ ಪ್ರೈದೋರುವಂಥ ಶೋಕ. ಕೇಳುವವ ರನ್ನು ಸೆರೆಹಿಡಿಯುವಂಥ ಅಪೂರ್ವ ಶಕ್ತಿ. ಅಷ್ಟು ಹೊತ್ತಿಗೆ ಕಛೇರಿ ಪ್ರಾರಂಭವಾಗಿ ಎರಡು ಗಂಟೆಗಳ ಮೇಲಾಗಿತ್ತು. ಹೊರಗೆ, ಸಂಜೆ ಮುಗಿದು ಕತ್ತಲು ಆವರಿಸಿಕೊಂಡು ಬರುತ್ತಿತ್ತು. ಶ್ರಾವಕರು ರಾಗರಸ ಮುಗ್ಧರಾಗಿ ಕೂತಿದ್ದರು. ಶ್ರೀನಿವಾಸಯ್ಯನು ಮಂಗ ಳದ ಕೃತಿಯನ್ನು ನುಡಿಯಿಸಲು ಕಮಾನು ಹಾಕಿದನು. ಒಡನೆ ನೂರಾರು ಜನ ಕೈ ಎತ್ತಿ ಕೂಗಿಕೊಂಡರು.—

"ನಾದನಾಮಕ್ರಿಯಾ—"

ಶ್ರೀನಿವಾಸಯ್ಯನು ಚಕಿತನಾದನು. ಸಿಡಿಲು ಹೊಡೆ ದಿದ್ದರೂ ಅವನು ಹಾಗೆ ಬೆಚ್ಚುತ್ತಿರಲಿಲ್ಲ. ಕೈಲಿದ್ದ ಕಮಾನು ಜಾರಿ ನಡುಗಿ ತೊಡೆಯಮೇಲೆ ಬಿದ್ದಿತು. ಹೆದರಿದ ಹುಲ್ಲೆಯಂತೆ ಸುತ್ತ ನೋಡಿದನು. ಪುನಃ ಕೂಗು—"ನಾದನಾಮಕ್ರಿಯಾ, ಬಾರಿಸಬೇಕು."

ದನಿಗೇಳಿ ಶ್ರೀನಿವಾಸಯ್ಯನು ಕಣ್ಣುಮುಚ್ಚಿಕೊಂ ಡನು. ಅವನಿಗೆ ಅಸಹನೀಯ ವೇದನೆಯೊಂದರ ಅನು ಭವವಾಗುತ್ತಿತ್ತು. ಮನಸ್ಸು ಮೂರ್ಛೆ ಹೋಗು ವಂತಿತ್ತು. ಜನರು ಹತ್ತಿರ ಬಂದು ಒಟ್ಟಾಗಿ ಪ್ರಾರ್ಥಿ ಸಿದರು. "ಇವತ್ತು ಕ್ಷಮಿಸಿ, ನುಡಿಯಿಸಲಾರೆ" ಎಂದು ಅಂಗಲಾಚುವ ದನಿಯಲ್ಲಿ ಬೇಡಿದನು. ಅವರಿಗೆ ಅದು ಕೇಳಲಿಲ್ಲ. ಬಾರಿಸಲೇ ಬೇಕೆಂದು ಕೂಗಿಕೊಂಡರು.

ಆ ರಾಗದಲ್ಲಿ ಶ್ರೀನಿವಾಸಯ್ಯ ಅದ್ವಿತೀಯ. ಈ ಸಂದರ್ಭವನ್ನು ಬಿಡುವುದೆ?

ಗಲಾಟೆ ಹೆಚ್ಚಾಯಿತು. "ನಾದನಾಮಕ್ರಿಯಾ" ಎಂದು ಕೂಗು ಹಬ್ಬಿತು. ಶ್ರೀನಿವಾಸಯ್ಯನು ಸುತ್ತ ನೋಡಿದನು. ಅವನ ಮುಖದ ಮೇಲೆ ಒಂದು ನಗು ವಿಕಟವಾಗಿ ಪ್ರೈದೋರಿ ಮರೆಯಾಯಿತು. ಕೈಗೆ ಕಮಾನು ಎತ್ತಿಕೊಂಡನು. ಸದ್ದು ಅಡಗಿ ಹೋಯಿತು. ಜನರೆಲ್ಲರೂ ಕೂತುಬಿಟ್ಟರು.

ಉಸಿರು ಬಿಟ್ಟದ್ದು ಕೇಳುವಂಥ ಮೌನ. ಜನರೆಲ್ಲರೂ ಆ ಒಂದು ರಾಗವನ್ನು ಕೇಳುವುದಕ್ಕೆ ಕಲ್ಲುಗೊಂಬೆಗಳಂತೆ ಕೂತಿದಾರೆ. ಕಮಾನು ತಂತಿಗಳ ಮೇಲೆ ಹರಿಯ ತೊಡಗಿದೆ. ಶ್ರೀನಿವಾಸಯ್ಯನು ಕಣ್ಣು ಮುಚ್ಚಿದಾನೆ. ರಾಗ ಅಲೆಯಲೆಯಾಗಿ ಭಾವಪೂರ್ಣವಾಗಿ ರಸವನ್ನು ಸೂಸುತ್ತ ಹರಿಯುತ್ತಿದೆ. ಶೋಕವೇ ನಾದನಾಮಕ್ರಿಯೆಯಾದಂತಿದೆ. ಶ್ರಾವಕರ ಕಣ್ಣುಗಳು ಒದ್ದೆಯಾಗುತ್ತಿವೆ. ಒಂದೊಂದು ಸಂಗತಿಯೂ, ಒಂದೊಂದು ಛಾಯೆಯೂ, ಆಳವಾದ ಅಳಲಿನ ಎರಕದಲ್ಲಿ ಚಿಮ್ಮುತ್ತಿದೆ. ದುಃಖ ಸರ್ವವ್ಯಾಪಿಯಾಗಿದೆ. ರಾಗಾಭಿಮಾನಿ ದೇವಿ ಸ್ವತಃ ನಿಂತು ಧೈವತದಲ್ಲಿ ನುಡಿಯುತ್ತಿದಾಳೆ. ಶ್ರೀನಿವಾಸಯ್ಯನಿಗೆ ಅದರ ಅರಿವಿಲ್ಲ. ಮನಸ್ಸು ಭಾವವಶವಾಗಿ ಅನಿರ್ವಚನೀಯತೆಗೇರಿದೆ. ಶೋಕಪೂರ್ಣವಾದ ತನ್ನ ಹೃದಯದ ಒಂದೊಂದು ಅವಸ್ಥೆಯೂ ಪಿಟೀಲಿನ ಒಂದೊಂದು ಪಲುಕಿನಿಂದ ಹೊರಹೊಮ್ಮುತ್ತಿರುವಂತೆ ಅವನ ಭಾವನೆ.

ಶ್ರೀನಿವಾಸಯ್ಯನು ಕೈ ತೆಗೆದು ಕಮಾನು ಎತ್ತಿ ಕಣ್ಣುಬಿಟ್ಟನು. ಹೃದಯದಲ್ಲಿ ತಡೆಯಲಾಗದ ದಾರುಣ ವೇದನೆ. ಮುಂದೆ ಬಾರಿಸುವ ಶಕ್ತಿ ಇದ್ದರೂ ಬಾರಿಸ ಲಾಗದ ಅಧೈರ್ಯ. ಕರುಳು ಕತ್ತರಿಸುವಂಥ ಹಿಂದಿನ ನೆನಪುಗಳು. ನಾಲಗೆ ಬಿಸಿಯಾಗಿದೆ; ಮುಖ ಹಣೆ ಯಲ್ಲಿಯ ಕುಂಕುಮದ ಬಣ್ಣವನ್ನು ತಳೆದಿದೆ. ಆದರೆ ರಾಗವನ್ನು ಮುಗಿಯಿಸದೆ ನಿಲ್ಲಿಸುವಂತಿಲ್ಲ. ಆ ಅವರೋಹಣ ಮಂಡಲವನ್ನು ಪ್ರಾರಂಭಿಸುವಾಗ ಮೂರ್ಛಾ ಸ್ಥಾನವನ್ನು ಕ್ಷಣದಲ್ಲಿ ಸ್ಪರ್ಶಿಸಿ ಮುಂದೆ ಇಳಿಯಬೇಕು.

ಶ್ರೀನಿವಾಸಯ್ಯನು ಆ ವೇದನೆಯಲ್ಲಿಯೂ ಒಂದು ನಗುವನ್ನು ನಕ್ಕನು. ಆ ಮಹಾಶಕ್ತಿಯನ್ನು ಎದುರಿಸುವುದು, ದೇವಿಯನ್ನು ಆ ಔನ್ನತ್ಯದಲ್ಲಿ ನಡೆಯಿಸುವುದು, ಅದ್ಭುತ ಭಯಂಕರ ಸಾಧನೆ. ಕ್ಷಣಭಂಗುರವಾದರೂ ಬೃಹತ್ಸೂಕ್ಷ್ಮವಾದ ಆ ಅವಸ್ಥೆ ಮಹತ್ತರವಾದುದು; ಭೀಮವಾದುದು. ಅದು ಈಗ ವ್ಯಕ್ತವಾಗಬೇಕು.

ಶ್ರೀನಿವಾಸಯ್ಯನು ನಡುಗಿದನು. "ಗತಿಯಿಲ್ಲ—ದೇವಿಯ ಇಚ್ಛೆ" ಎಂದು ಮಾತ್ರ ನುಡಿದನು. ಅವನ ದೇಹಾದ್ಯಂತವೂ ಮಹಾ ವಿದ್ಯುತ್ಪ್ರವಾಹವೊಂದರಿಂದ ಸ್ಪಂದನವಾಯಿತು. ಕಮಾನನ್ನು ತಂತಿಗಳ ಮೇಲಿಟ್ಟನು.

ಜನರು ನಟ್ಟ ಕಂಗಳಿಂದ ನಿರೀಕ್ಷಿಸುತ್ತ ಮೌನ ಮುಗ್ಧರಾಗಿದ್ದರು. ಕಮಾನು ಹರಿಯಿತು. ಶ್ರೀನಿವಾಸಯ್ಯನು ನೀಳವಾಗಿ ಸುಯ್ದು ಕಣ್ಣುಮುಚ್ಚಿ

ಕೊಂಡನು. ಅವ್ಯಕ್ತ ವ್ಯಕ್ತವಾಗಿ ದೇವಿಯ ಸಾನ್ನಿಧ್ಯದ ಅದ್ಭುತಾನುಭವವಾಯಿತು. ಕ್ಷಣಭಂಗುರವಾದ ಆ ಗತಿ ಚಿರಸ್ಥಾಯಿಯಾಯಿತು. ನಾದವು ಬ್ರಹ್ಮವಾಗಿ ಚಿರನೂತನವಾಗಿ ಅಸಾಧ್ಯವಾಗಿ ಓಂಕಾರಮಯವಾಯಿತು. ಅದೆಂಥ ಅಮಾನುಷ ತಂತ್ರೀ ಸಂಚಾರ!

ನಾದ ಬದಲಾಯಿಸದಿದ್ದುದನ್ನು ಕಂಡು ಜನರು ಕೂಗಿಕೊಂಡರು. ಚಲಿತರಾಗಿ ಶ್ರೀನಿವಾಸಯ್ಯನ ಕಡೆ ಧಾವಿಸಿದರು. ಅವನ ಕಣ್ಣುಗಳಲ್ಲಿ ನಿಮಿಷಗಳ ಹಿಂದೆ ಹರಿದ ಅಜಸ್ರಾಶ್ರುಧಾರೆ ಹಾಗೆಯೇ ಇದೆ. ಕೂಗುತ್ತ ಅವನನ್ನು ಅಲ್ಲಾಡಿಸಿದರು. ಪಿಟೀಲು ಕೆಳಗೆ ಬಿದ್ದಿತು. ಅದರ ಒಂದು ಕೊನೆ ಸೀಳುಬಿಟ್ಟಿತು. ನಾದ ಮುಕ್ತವಾಗಿ ಹೋಗಿತ್ತು. ಎಲ್ಲರೂ ಗಾಬರಿಯಾಗಿ ಕಿರಿಚಿದರು. ಶ್ರೀನಿವಾಸಯ್ಯನ ಮೈ ತಣ್ಣಗಾಗಿತ್ತು.

* * * *

ಪಿಟೀಲು ಶ್ರೀನಿವಾಸಯ್ಯ ನಾದನಾಮಕ್ರಿಯಾ ರಾಗ ಸಮಾಧಿಸ್ಥನಾಗಿ ವರುಷಗಳಾಗಿವೆ. ನಗರದವರು ಅವನಿಗಾಗಿ ಬಹಳ ಮರುಗಿ ಅವನ ಜ್ಞಾಪಕಾರ್ಥವಾಗಿ ಊರ ನಡುವೆ ಅಮೃತಶಿಲೆಯೊಂದನ್ನು ನೆಟ್ಟು ಅದರ ಮೇಲೆ ಅವನ ಹೆಸರನ್ನು ಕೆತ್ತಿದಾರೆ. ಒಂದೊಂದು ಸಲ ತುಂಬಿದ ಹುಣ್ಣಿಮೆಯ ಬೆಳದಿಂಗಳಿನ ರಾತ್ರಿಗಳಲ್ಲಿ ಅಪರೂಪವಾಗಿ ನಾದನಾಮಕ್ರಿಯಾ ರಾಗಾಲಾಪನೆ ಆ ಅಮೃತಶಿಲಾಗರ್ಭದಿಂದುಕ್ಕಿ ಬಂದಂತೆ ಅನೇಕರಿಗೆ ಅನುಭವವಾಗಿದೆ. ಶ್ರೀನಿವಾಸಯ್ಯನ ಪಿಟೀಲು ಮಾತ್ರ ಎಲ್ಲಿ ಹುಡುಕಿದರೂ ಯಾರಿಗೂ ಸಿಕ್ಕಿಲ್ಲ.

# ಬಂಗಾರದ ಬೆಟ್ಟ



When all sister planets have decayed
When wrapt in the fire the realms of ether glow
And heaven's last thunder shakes the world below
Thou undismay'd over the ruin smile
And light thy torch at Nature's funeral pile.

—CAMPBELL.

೧

ಹದಿನಾಲ್ಕನೆಯ ಶತಮಾನದ ಅಂತ್ಯ. ಚೊಕ್ಕಟವಾದ ತೆರುಕಶಾಂಬಿಯ ರಾಜವೀಥಿಗಳು, ಅಲ್ಲಿನ ಉದ್ಯಾನಗಳನ್ನೂ, ಅರಮನೆಗಳನ್ನೂ, ದೇವಾಲಯಗಳನ್ನೂ ಹೊಡೆದಿಟ್ಟದ್ದವು.

ರಾಜವೀಥಿಗಳೊಂದರಲ್ಲಿ, ಜನಗಳ ಮಧ್ಯೆ ನುಸಿಯುತ್ತ ಆಜಾನುಬಾಹುವೊಬ್ಬನು ವೇಗವಾಗಿ ನಡೆಯುತ್ತಿದ್ದನು. ಅವನ ಮುಖದಲ್ಲಿ ದನ್ಯವಾದ ತವಕವು ತಾಂಡವವಾಡುತ್ತಿದ್ದಿತು. ಬಹಳ ವೇಗವಾಗಿ ನಡೆಯುತ್ತಿದ್ದುದರಿಂದ ಜನಗಳ ಗುಂಪು ಜೇಗ ಕಡಿಮೆಯಾಗಿ ಹೋಯಿತು—ಊರಾಚೆಗೆ ಬಂದು ಬಿಟ್ಟನು.

ಎದುರಿಗೆ, ನೆತ್ತಿಗೇರುತ್ತಿದ್ದ ಸೂರ್ಯನಿಂದ ಆಗಾಗ ಕಣ್ಣುಗಳನ್ನು ಕೈಯಿಂದ ಮರೆಮಾಡಿಕೊಳ್ಳುತ್ತ ನಡೆದನು.

ದಾರಿಯಲ್ಲಿ ಒಂದು ಅಶ್ವತ್ಥದ ಮರ. ಅದರ ಸುತ್ತಲೂ ಕಟ್ಟಿದ್ದ ಕಟ್ಟೆಯ ಮೇಲೆ, ಒಬ್ಬ ಗೋಸಾಯಿಯು ಕುಳಿತಿದ್ದನು. ಕಣ್ಣುಮುಚ್ಚಿಕೊಂಡಿದ್ದುದರಿಂದ ಧ್ಯಾನದಲ್ಲಿದ್ದಂತಿದ್ದಿತು. ವೇಗವಾಗಿ ನಡೆಯುತ್ತಿದ್ದವನು ಅಲ್ಲಿಗೆ ನಿಧಾನವಾಗಿ ಬಂದು, ಗೋಸಾಯಿಗೆ ಸಾಷ್ಟಾಂಗಪ್ರಣಾಮವನ್ನರ್ಪಿಸಿದನು. ಗೋಸಾಯಿಯು ಕಣ್ಣು ಬಿಡಲಿಲ್ಲ. ಆಗಂತುಕನು ಹಾಗೆಯೇ ನಿಂತಿದ್ದನು.

ಅರ್ಧಘಂಟೆಯಾಯಿತು. ಆಮೇಲೆ ಗೋಸಾಯಿಯು ಕಣ್ಣುಗಳನ್ನು ಬಿಟ್ಟು, ಕೊಂಚ ಹೊತ್ತಾದ ಮೇಲೆ,

ಅವನ ಕಡೆ ನೋಡಿ,

"ಓಹೋ—ನೀನೆ—ಕುಳಿತುಕೋ–" ಎಂದು ನಿಧಾನವಾಗಿ ಹೇಳಿದನು. ನಿಂತಿದ್ದವನು ಕುಳಿತುಕೊಂಡನು.

"ಏನು—ಬಂದುದು?"

"ಆ ದಿನ ಹೇಳಿದಿರಲ್ಲ...."

"ನಿನಗೆ ಇನ್ನೂ ಆ ಹುಚ್ಚು ಹೋಗಲಿಲ್ಲವೊ?"

"ಇಲ್ಲ. ಹೋಗುವ ಸಂಭವವೂ ಇಲ್ಲ—ನಾನು ದರಿದ್ರ. ಆದರೆ ಶೂರ........ಹೃದಯದಲ್ಲಿನ ಆಶೆಗಳು ಮಹತ್ತರವಾಗಿವೆ....ಜಾಗರೂಕರಾಗಿಯೋ ಅಜಾಗರೂಕರಾಗಿಯೋ, ನನಗೆ ಆ ಹುಚ್ಚು ಹಿಡಿಸಿದಿರಿ........"

"—ಈಗ ನನಗೆ ತೋಚುತ್ತಿದೆ, ಆ ಪ್ರಸ್ತಾಪವನ್ನೆತ್ತಿದುದೇ ಶುದ್ಧ ಅವಿವೇಕವೆಂದು. ನಾನು ಒಂದು ಅನುಭವವನ್ನು ವಿವರಿಸಲು....ಅದರ ವಿಚಾರವಾಗಿ ಹೇಳಬೇಕಾಯಿತು....ಈಗ."

"ಈಗ ಆದ ನಷ್ಟವೇನು?"

ಗೋಸಾಯಿಯು ಉತ್ತರವನ್ನೀಯಲಿಲ್ಲ. ಆಗಂತುಕನು ಆತುರದಿಂದ, ಅರೆನಗುತ್ತ,

"ನಾನು ಬಿಲ್ಲುಗಾರನೆಂದು, ಹೆಚ್ಚಾಗಿ ಎದೆಗಾರನೆಂದೂ ನಿಮಗೆ ತಿಳಿದೇಯಿದೆ...."

"....ಅದಲ್ಲ....ನಿನಗೆ ಬಿಚ್ಚಿ ಹೇಳುವುದು ಕಷ್ಟ....ನಾನು ಸಂನ್ಯಾಸಿಯಾಗಿ ಹಿಂತಿರುಗಿದೆ........" ಎಂದು ಅರ್ಧದಲ್ಲಿಯೇ ನಿಲ್ಲಿಸಿದನು.

"ನನ್ನನ್ನು ಸುಮ್ಮನೆ ಅರ್ಧವಾಕ್ಯಗಳಿಂದ ಬೆದರಿಸಲು ಯತ್ನಿಸಬೇಡಿ....ನಿಮ್ಮ ಅಪ್ಪಣೆಯನ್ನು ಪಡೆದು........"

"....ನಿನಗೆ ತಿಳಿದೇಯಿದೆ. ಇದಕ್ಕೆ ನನ್ನ ಅಪ್ಪನ ಒಪ್ಪಿಗೆಯಾಗಲೀ ಸಮ್ಮತಿಯಾಗಲೀ ಇಲ್ಲ."

"ಹಾಗಾದರೆ ಅವುಗಳಿಲ್ಲದೆಯೇ ಹೊರಡುತ್ತೇನೆ...." ಎಂದನು. ಧ್ವನಿಯಲ್ಲಿ ಅಗೌರವವಿಲ್ಲದಿದ್ದರೂ, ನಿಶ್ಚಯವು ಉಕ್ಕುತ್ತಿದ್ದಿತು.

"ಇದೇ ನಿನ್ನ ದೃಢ ಸಂಕಲ್ಪವೊ....?"

"ಹೌದು."

"ದೈವೇಚ್ಛೆ....ನಿನ್ನ ಹೆಸರೇನು?"

"ಕೊಂಡಯ್ಯ."

೨

ಕೊಂಡಯ್ಯನು ಚಿಕ್ಕಮಗಳೂರನ್ನು ಬೆಳಗಿನ ಜಾವಕ್ಕಿಂತ ಮುಂಚೆಯೇ ಬಿಟ್ಟನು. ದತ್ತಾತ್ರೇಯ ಪೀಠವನ್ನು ದಾಟುವ ಹೊತ್ತಿಗೆ ಹನ್ನೆರಡು ಘಂಟೆಯಾಗಿ ಹೋಗಿದ್ದಿತು. ನಿರ್ಜನ ಪ್ರದೇಶ. ಹಕ್ಕಿಗಳು ಚಿಲಿಪಿಲಿ ಗುಟ್ಟುತ್ತಿದ್ದುವು. ಅಲ್ಲಲ್ಲಿ, ಮರೆಯಲ್ಲಿ ಹರಿಯುತ್ತಿದ್ದ ಸಣ್ಣ ಝರಿಗಳು ವೇಣುನಾದವನ್ನೂ ಮಾಡುತ್ತಿದ್ದವು. ತಂಗಾಳಿಯು, ಗಿಡಮರಗಳ ಪ್ರತಿ ಸ್ಪಂದನವನ್ನು ಇದರೊಂದಿಗೆ ಜೋಡಿಸಿ, ನಾದವ್ಯೂಹ ಒಂದನ್ನು ರಚಿಸಿದ್ದಿತು.

ಕೊಂಡಯ್ಯನು, ತಾನು ಹೊತ್ತಿದ್ದ ಚೀಲವನ್ನು ಕೆಳಗಿರಿಸಿ, ಹತ್ತಿರಿದ್ದ ಝರಿಯೊಂದರಲ್ಲಿ ಕೈಕಾಲು ಮುಖಗಳನ್ನು ತೊಳೆದುಕೊಂಡನು.

* * * *

ಚೀಲವನ್ನು ಪುನಃ ಬೆನ್ನಿಗೇರಿಸಿ, ಸೊಂಟದಲ್ಲಿದ್ದ ಕುಡುಗೋಲನ್ನು ಸರಿಯಾಗಿ ಸಿಕ್ಕಿಸಿಕೊಂಡನು. ಒಮ್ಮೆ

ಸುತ್ತಲೂ, ಪಸುರಿನ ರಾಶಿಯ ಮೇಲೆ ದೃಷ್ಟಿಯನ್ನು ಬೀರಿದನು. ಬೆಟ್ಟದ ಗಾಳಿಯು ಸುವಾಸನೆಯಾಗಿ ಸುಯ್ಯನೆ ಬೀಸಿತು. ಅದನ್ನು ದೀರ್ಘವಾಗೆಳೆದುಕೊಂಡು ಮುಂದೆ ನಡೆದನು.

೩

ಆರು ಘಂಟೆಗೆ ಕಲ್ಲತ್ತಿಗಿರಿಯನ್ನು ಸೇರಿದನು. ಎದೆಯು ಡವಡವನೆ ಹೊಡೆದುಕೊಳ್ಳುತ್ತಿದ್ದಿತು........

ಸಂಧ್ಯಾ ಸೂರ್ಯನು, ತನ್ನ ಕನಕಕಿರಣಗಳಿಂದ, ಅಲ್ಲಿನ ಕೋಡುಗಲ್ಲುಗಳನ್ನು ಚಿನ್ನದ ತಗಡುಗಳಿಂದ ಮುಚ್ಚಿದ್ದನು. ಅದನ್ನು ನೋಡಿ ಕೊಂಡಯ್ಯನು ಭ್ರಮೆಗೊಂಡನು.

ಅಷ್ಟರವರೆವಿಗೆ, ಧೈರ್ಯವಾಗಿ ಯೋಚನೆಯಿಲ್ಲದೆ ನಡೆಯುತ್ತಿದ್ದವನು, ಆಗ ತಡೆದು ತಡೆದು ನಡೆಯಲಾರಂಭಿಸಿದನು.

*  *  *  *

ಸಾಯಂಕಾಲದ ಗಾಳಿಯು, ಮನುಷ್ಯರ ಮಾತಿನ ಸದ್ದನ್ನು ತೂರಿಕೊಂಡು ಬಂದಿತು. ಕೊಂಡಯ್ಯನ ಎದೆಯು ಹಾರಲಾರಂಭಿಸಿತು. ಚೀಲವನ್ನು ಕೆಳಗಿಳಿಸಿ, ಎದುರಿಗೆದ್ದು ನಿಂತಿದ್ದ ಬಂಡೆಯೊಂದನ್ನು ಮೆಲ್ಲನೆ ಹತ್ತಿ ಅದರ ಮೇಲೆ ಬೆಳೆದಿದ್ದ ಮತ್ತಿಗಿಡವೊಂದರ ಮರೆಯಿಂದ ನೋಡಿದನು....

ಇನ್ನೂರು ಗಜದೂರದಲ್ಲಿ, ಅವನ ಕಡೆಗೆ ಬೆನ್ನು ತಿರುಗಿಸಿಕೊಂಡು, ಹರಿಯುತ್ತಿದ್ದ ಝರಿಯ ಬಳಿ, ಮೂವರು ಕುಳಿತು, ಏನ್ನನ್ನೋ, ತೊಳೆದುತೊಳೆದು ರಾಸಿಹಾಕು

ತ್ತಿದ್ದರು. ಆ ರಾಸಿಯು, ಕ್ಷೀಣವಾದ ಬಿಸಿಲಿನಲ್ಲಿ ಮಿನು ಗುತ್ತಿದ್ದಿತು.

ಕೊಂಡಯ್ಯನಿಗೆ ಏನೂ ತೋಚಲಿಲ್ಲ.........ಇವರು ಯಾರು? ಇವರೊಡನೆ ಸ್ನೇಹ ಬೆಳೆಸುವುದೆ?—ತನ್ನ ಕೆಲಸ! ತನ್ನಂತೆಯೇ ಬಂದಿದ್ದಾರೆಯೋ ಏನೋ.... ... ಪಾಲಿನ ಪ್ರಶ್ನೆಯು ಬಂದರೆ!........ಪಾಲುಕೊಡದೆಯೇ, ತಾನು ಒಬ್ಬಂಟಿಗನಾಗಿಯೇ ಕೆಲಸಮಾಡಿದರೆ!........ ಮಾಡಲು ಸಾಧ್ಯವೆ........?

* * * *

ಕೊಂಡಯ್ಯನ ಹೃದಯದ ಬಡಿತವು ಹೊರಗೆ ಕೇಳಿಸು ತ್ತಿತ್ತು. ಮುಖವು ಹಾಗೆಯೇ ಕಠಿಣವಾಯಿತು.... ಮೆಲ್ಲನೆ ಕೆಳಕ್ಕಿಳಿದು, ಚೀಲದಲ್ಲಿದ್ದ ಬಿಲ್ಲನ್ನು ತೆಗೆದನು. ಕೈಕಾಲುಗಳು ನಡುಗುತ್ತಿದ್ದವು. ಪುನಃ ಆ ಬಂಡೆಯನ್ನು ಹತ್ತಿದನು............

ಸರ್ರನೆ ಕೆಳಗಿಳಿದು ಝರಿಯ ಬಳಿಗೋಡಿದನು. ಆ ಮೂವರೂ ಸದ್ದಿಲ್ಲದೆ ಬಿದ್ದಿದ್ದರು: ಸುತ್ತ ಒಮ್ಮೆ ನೋಡಿ, ಅವರು ತೊಳೆಯುತ್ತಿದ್ದುದನ್ನು ಕೈಗೆ ತೆಗೆದುಕೊಂಡನು.... ಯಾವುದೋ ಹಳದಿಯ ಬಣ್ಣದ ಮೂಲಿಕೆಗಳು........ ತರತರನೆ ನಡುಗಲಾರಂಭಿಸಿದನು.

....ಬೇಗ ಕತ್ತಲೆಯಾಗುತ್ತ ಬಂದಿತು. ಒಂದೊಂದು ದೇಹವನ್ನು ಎಳೆದುಕೊಂಡು ಹೋದನು. ಅಲ್ಲಿ ಒಂದು ಕಮರಿಯಿದ್ದಿತು. ಅದರಂಚಿನಲ್ಲಿ ನಿಂತು, ಒಂದೊಂದು ಹೆಣವನ್ನಾಗಿ ಕೆಳಗೆ ತಳ್ಳಿದನು....ಒಂದು ಪೂರ್ಣ ನಿಮಿ ಷವು ಕಳೆದು ಹೋಯಿತು. ಆಮೇಲೆ ಮೆಲ್ಲನೆ—

'ತಪ್, ತಪ್,....ತಪ್' ಎಂದು ಕೇಳಿಸಿತು.

ಅಲ್ಲಲ್ಲಿ ಹುಡುಕಿದನು. ಅವರ ಗುಹೆಯು ಸಿಕ್ಕಿತು. ಅವರ ಬಾಯ ಬಳಿಯಲ್ಲಿದ್ದ ಪೊದರಿನ ಮರೆಯಲ್ಲಿ ನಿಂತು ಎರಡು ಸಲ ಕೆಮ್ಮಿದನು. ಕೊಂಚ ಹೊತ್ತಾಯಿತು. ಯಾರೂ ಬರಲಿಲ್ಲ....ಮೆಲ್ಲನೆ ಒಳಹೊಕ್ಕನು.

ಹಣತೆಯೊಂದು ಮೌನವಾಗಿ ಮೂಲೆಯೊಂದರಲ್ಲಿ ಉರಿಯುತ್ತಿದ್ದಿತು. ಸುತ್ತಲೂ ನೋಡಿದನು. ಇನ್ನೊಂದು ಮೂಲೆಯಲ್ಲಿ ಮೂಲಿಕೆಗಳ ರಾಶಿ....ಎಡಗಡೆ ಎರಡು ಮಡಕೆಗಳು....ಪುನಃ ಮೆಲ್ಲನೆ ಹೊರ ಹೊರಟು, ಹಾಗೆಯೇ ಆಲಿಸಿದನು—ವೇಗವಾಗಿ ಹೊರಟು, ಆ ಬಂಡೆಯನ್ನು ಹತ್ತಿ ಇಳಿದು ಅಲ್ಲಿ ಹಾಕಿದ್ದ ಚೀಲವನ್ನು ಬೆನ್ನಿಗೇರಿಸಿ ಕೊಂಡು, ಪುನಃ ಮೆಲ್ಲನೆ ಗುಹೆಗೆ ಬಂದು, ತನ್ನ ಚೀಲ ದಲ್ಲಿದ್ದ ಸಾಮಾನುಗಳನ್ನೆಲ್ಲಾ ಒಂದು ಕಡೆ ಸುರಿದು, ಚೀಲವನ್ನು ಹಾಸಿ, ಗುಹೆಯ ಬಾಗಿಲ ಬಳಿಯಿದ್ದ, ಹಲಿಗೆಯೊಂದರಿಂದ ಅದನ್ನು ಮುಚ್ಚಿ ಮಲಗಿಕೊಳ್ಳಲು ಬಂದನು. ಹಾಗೆಯೇ ಮಡಕೆಗಳ ಕಡೆಗೆ ದೃಷ್ಟಿಯು ಹೊರಳಿತು........

ಮೊದಲು....ಈ ಮಡಕೆ ಅಲ್ಲಿದ್ದಿತು. ಆ ಮಡಕೆ ಇಲ್ಲಿ ದ್ದಿತು.....ಈಗ ಒಂದು ಉರುಳಿಕೊಂಡಿದೆಯಲ್ಲಾ....! ಕೊಂಡಯ್ಯನ ಮೈಯ್ಯೆಲ್ಲಾ ನಡುಗಲಾರಂಭಿಸಿತು. ಪುನಃ ಬಾಗಿಲ ಬಳಿಗೆ ಬಂದು ಆಲಿಸಿದನು, ಒಳಗೆಲ್ಲ ನೋಡಿ ದನು. ಅವನಿಗೇನೂ ಕಾಣಿಸಲಿಲ್ಲ........ಮತ್ತೆ! ಅದು ಹಾಗೆಯೇ ಇದ್ದಿತೋ ಏನೋ...ಹೌದು ಹೌದು...ಉರುಳಿ ಬಿದ್ದಿತ್ತು ಆ ಮಡಕೆ....ಅದೇಕೋ ಮರೆತು ಬಿಟ್ಟಿದ್ದ.

ಕುಡುಗೋಲನ್ನು, ಗೋಣಿಚೀಲದ ಬಳಿಯಲ್ಲಿಟ್ಟು ಹಣತೆಯನ್ನು ಆರಿಸಿ, ಮಲಗಿಕ್ಕೊಂಡನು.

* * * *

ಮಧ್ಯರಾತ್ರಿಯು ಕಳೆದು ಹೋಯಿತು. ಕೊಂಡಯ್ಯನಿಗೆ ತಟ್ಟನೆ ಎಚ್ಚರವಾಯಿತು....ಹೊರಗಡೆಯಿಂದ ಯಾರೋ ಬಾಗಿಲನ್ನು ತಟ್ಟಿದರು.

"ಯಾರು" ಎನ್ನಲು ಹೊರಟನು. ಮಾತು ಹೊರಡಲಿಲ್ಲ. ಹೊರಗಡೆ ಯಾರೋ ನಿಂತು 'ಅನ್ಯಾಯ! ಅನ್ಯಾಯ!' ಎನ್ನುತ್ತಿದ್ದರು.

ಕೊಂಡಯ್ಯನ ಮೈಯ್ಯೆಲ್ಲ ಬೆವತು ಹೋಯಿತು. ಮೆಲ್ಲನೆದ್ದನು. ಕೈಯ್ಯಲ್ಲಿ ಕುಡುಗೋಲನ್ನು ಹಿಡಿದು, ಗುಹೆಯ ಬಾಯನ್ನು ಮುಚ್ಚಿದ್ದ ಹಲಿಗೆಯನ್ನು ಮೆಲ್ಲನೆ ಓರೆಮಾಡಿ ನೋಡಿದನು. ಗಭೀರವಾದ ರಾತ್ರಿ. ಗಾಳಿಯೂ ಸಹ ಇರಲಿಲ್ಲ. ಕ್ರಿಮಿಕೀಟಗಳು ಮಾತ್ರ "ಝುಂ!" ಎನ್ನುತ್ತಿದ್ದವು. ಮೆಲ್ಲನೆ ಹೊರಗೆ ಬಂದನು. ಹಾಗೆಯೇ ಗುಹೆಯನ್ನೊಂದು ಸುತ್ತುಹಾಕಿದನು. ಏನೂ ಕೇಳಿಸಲಿಲ್ಲ. ಕಾಣಿಸಲೂ ಇಲ್ಲ. ಪುನಃ ಒಳಕ್ಕೆ ಬಂದು ಮಲಗಿಕ್ಕೊಂಡನು.

ಆದರೆ ತಿರುಗಿ ನಿದ್ದೆ ಹತ್ತಲಿಲ್ಲ.

೪

ದಿನದ ಮುಂಬೆಳಕು ಪರ್ವತ ಪ್ರದೇಶವನ್ನು ಬೆಳಗಿದೊಡನೆಯೆ, ಕೊಂಡಯ್ಯನು ಎದ್ದು, ಗುಡಿಸಿಲಿನಲ್ಲಿದ್ದ, ಮೂಲಿಕೆಗಳ ರಾಶಿಯನ್ನೂ, ಮಡಕೆಗಳನ್ನೂ ಚೀಲದಲ್ಲಿ ತುಂಬಿಕ್ಕೊಂಡು ಹೋಗಿ, ಆ ಕಮರಿಯಲ್ಲಿ ಸುರಿದು

ಬಿಟ್ಟನು. ಅವರ ಲುಂಗಿಗಳೈದಾರಿದ್ದುವು. ಅವನ್ನೂ ಆ ಕಮರಿಯಲ್ಲಿ ಹಾಕಬೇಕೆಂದಿದ್ದನು—ಆದರೆ ಆಮೇಲೆ ಏನೋ ಯೋಚನೆ ಹೊಳೆದು ಹಾಗೆಯೇ ಇಟ್ಟುಕೊಂಡನು.

* * * *

ಅಲ್ಲಲ್ಲಿ ಸುತ್ತಾಡಲಾರಂಭಿಸಿದನು. ಮೂರು ನಾಲ್ಕು ಕಡೆಗಳಿಂದ ಕೆಲವು ಕಲ್ಲು-ಮಣ್ಣು ಹೆಂಟೆಗಳನ್ನು ತಂದು ಚೆನ್ನಾಗಿ ಪುಡಿಮಾಡಿ, ಆ ಪುಡಿಯನ್ನು ಒಂದು ಬಟ್ಟೆಯ ಮೇಲೆ ಹಾಕಿ, ಹರಿಯುತ್ತಿದ್ದ ಝರಿಯ ನೀರಿನಲ್ಲಿಟ್ಟನು. ನೆಳವು, ಕಲ್ಲು-ಮಣ್ಣು ಪುಡಿಯನ್ನು ಹೊಡೆದುಕೊಂಡು ಹೋಯಿತು. ಕೆಳಗೆ, ತಳತಳಿಸುತ್ತ, ಚಿನ್ನದ ಪುಡಿಯು ಉಳಿಯಿತು.

ಕೊಂಡಯ್ಯನು ಹಾಗೆಯೇ ನಸುನಕ್ಕನು.

## ೫

ಎರಡು ವರುಷಗಳು ಕಳೆದು ಹೋದವು. ಗುಹೆಯು ಹಾಗೆಯೇ ಇದ್ದಿತು. ಕಮರಿಯ ಘೋರ ಗಹ್ವರದಿಂದ ಇನ್ನೂ ನಾಲ್ಕೈದು ಸಲ ' ತಪ್, ತಪ್ ' ಎಂದು ಕೇಳ ಬಂದಿದ್ದಿತು.

ಗುಹೆಯು ಇದ್ದ ಹಾಗೆಯೇ ಇದ್ದಿತು ಎಂದು ಹೇಳಲ್ಪಟ್ಟಿದೆ.—ಹೊರಗೆ ಹಾಗೆಯೇ ಇದ್ದಿತು; ಒಳಗೆ ಒಂದು ಸಣ್ಣದಾದ ನೆಲಮಾಳಿಗೆಯು ರಚಿಸಲ್ಪಟ್ಟಿದ್ದಿತು. ಅದರೊಳಗೆ ಇಪತ್ತು ಈಚಲು ಗರಿಯ ಚೀಲಗಳಿದ್ದವು. ಅವನ್ನೂ ಹಾಗೆಯೇ ಗೋಸಾಯಿಯ ವೇಷದಿಂದ ಊರಿಗೆ ಸಾಗಿಸಿಬಿಟ್ಟರೆ....! ಅದನ್ನು ನೆನೆಸಿಕೊಂಡಾಗೆಲ್ಲ ಅವನೆದೆಯು ಕುಣಿಯುತ್ತಿದ್ದಿತು. ಆದರೆ, ಹಾಗೆಯೇ ಅವರ ಹಿಂದೆಯೇ

ಕಮರಿಯ ತಳದಲ್ಲಿ ದಿನೇ ದಿನೇ ಬಿಳುಪೇರುತ್ತಿದ್ದ ಮೂಳೆಗಳ ನೆನಹೂ ಬರುತ್ತಿದ್ದಿತು....ಆದರೆ! ಹೌದು ತನ್ನ ಹಿಂದೇಕೆ ಅನುಮಾನದಿಂದ ಬರಬೇಕು....ತನ್ನ ಬಂಗಾರ ....ತಾನು ಆರ್ಜಿಸಿದುದು....ಅದಕ್ಕೆ ಆಶೆಬಿದ್ದು ಬಂದರೆ... ನ್ಯಾಯವೆ!....ಅಷ್ಟು ಬಂಗಾರವನ್ನು!....ಒಂದು ವೇಳೆ ಅದು ಬಂಗಾರವಾಗಿಲ್ಲದಿದ್ದರೆ ...ಆ! ತಾನು ಇಷ್ಟು ಕಷ್ಟ ಪಟ್ಟುದು....ಛೆ. ಬಂಗಾರವಲ್ಲದೇ ಏನು....ಈ ದಿನವೂ ದಾರಿಯನ್ನು ಕಾಯಬೇಕು. ಮಾರೇನಹಳ್ಳಿಯವರು ಒಂದರೂ ಬರಬಹುದು....ಬರಲಿ! ಮಾಡುವುದೇನು.... ಸಧ್ಯ! ಉಳಿದಿರುವ ಚೀಲಗಳನ್ನು ಸಾಗಿಸಿ ಬಿಟ್ಟರೆ........

* * * *

ಒಂದು ದಿನ ರಾತ್ರಿ. ಗುಹೆಯ ಬಾಯನ್ನು ಭದ್ರವಾಗಿ ಮುಚ್ಚಿ, ಮಣ್ಣು ಹಣತೆಯನ್ನು ಹಚ್ಚಿ, ಹಾಗೆಯೇ ನಿಂತುಕೊಂಡನು. ಅವನ ನೆರಳು ಪಕ್ಕದ ಕಲ್ಲುಗೋಡೆಯ ಮೇಲೆ ಡೊಂಕುಡೊಂಕಾಗಿ ಬಿದ್ದಿದ್ದಿತು. ಅವನ ಗಡ್ಡವು ಕೊಂಚಕೊಂಚವಾಗಿ, ಆ ನೆರಳಿನಲ್ಲಿ ಕುಣಿಯುತ್ತಿದ್ದಿತು. ಅದನ್ನು ನೋಡುತ್ತ—

"ಹಾಗೆ....ಇರಲಾರದು....ಇನ್ನೊಮ್ಮೆ ನೋಡೋಣ" ಎಂದು ಒಳಗೇ ಮಾತನಾಡಿಕೊಂಡನು.

ನೆಲಮಾಳಿಗೆಯಿಂದ ಚೀಲವೊಂದನ್ನು ತಂದು, ಅದರಲ್ಲಿದ್ದ ಪುಡಿಯನ್ನು ಹಣತೆಯ ಎದುರಿಗೆ ಸುರಿದನು. ಅದರ ಮುಂದೆ ಕುಳಿತುಕೊಂಡನು. ಹಾಗೆಯೇ....

ಒಂದು ಹಿಡಿ ಚಿನ್ನದ ಪುಡಿಯನ್ನು ತೆಗೆದುಕೊಂಡು, ಮೇಲಿನಿಂದ ಕೆಳಕ್ಕೆ ಸಣ್ಣದಾಗಿ ಸುರಿದನು. ಆ ಹಿರಣ್ಯ

ಧಾರೆಯನ್ನು ನೋಡಿ ಅವನ ಮುಖವು ಪ್ರಫುಲ್ಲಿತ ವಾಯಿತು.

'ಇವೆಲ್ಲ....ನನ್ನ ಬಂಗಾರ....ನಾನು ಎರಡು ವರುಷ ಗಳು ನಿಂತಲ್ಲಿ ನಿಲ್ಲದೆ, ದುಡಿಮದರ ಫಲ....' ಎಂದನು. ಇದ್ದಕ್ಕಿದ್ದ ಹಾಗೆಯೇ—ಹೊರಗಡೆಯಿಂದ—

'ಇದು ಬಂಗಾರವಲ್ಲ!' ಎಂಬ ಮಾತುಗಳು ಮೇಘ ಘೋರ್ಜೆಯಂತೆ ಕೇಳಬಂದವು....ಕೊಂಡಯ್ಯನಿಗೆ ಸ್ಮೃತಿ ತಪ್ಪಿತು.

....ಎಚ್ಚೆತ್ತು ನೋಡಿದನು. ಎಲ್ಲೆಲ್ಲಿಯೂ ನಿಶ್ಶಬ್ದ ವಾಗಿದ್ದಿತು.

....ಹೊರಗಿನಿಂದ ಬಾಗಿಲಿಗೆ ಯಾರೋ ಒಂದು ಒದೆ ಯನ್ನು ಕೊಟ್ಟರು. ಅದು ಪುಡಿ ಪುಡಿಯಾಯಿತು. ಕೊಂಡಯ್ಯನ ಕೈ, ಅಭ್ಯಾಸಬಲದಿಂದ ಕುಡುಗೋಲಿನ ಕಡೆಗೆ ಹೋಯಿತು. ಆದರೆ ಅದು ಅಲ್ಲಿಯೇ ನಿಂತಿತು. ಎತ್ತಿದ ಕತ್ತು ಕಲ್ಲಾಯಿತು.

....ಒಂಭತ್ತು–ಹತ್ತು ಅಡಿ ಎತ್ತರದ ಒಬ್ಬ ಗೋಸಾ ಯಿಯು ಒಳಕ್ಕೆ ಪ್ರವೇಶಿಸಿದನು. ಅವನ ಜಟಾಜೂಟ ಗಳು ದೇಹಾದ್ಯಂತವನ್ನೂ ಮುಚ್ಚಿದ್ದುವು....

'ಇದು ಬಂಗಾರವಲ್ಲ! ಕಾಗೆ ಬಂಗಾರ....ನಿನಗಷ್ಟು ವ್ಯತ್ಯಾಸ ತಿಳಿಯಲಿಲ್ಲವೆ....?....' ಎಂದನು. ಗುಡುಗಿ ನಂತಿದ್ದ ಅವನ ನಿಸ್ವನವು ಕೊಂಡಯ್ಯನ ಕಿವಿಗಳನ್ನು ಮುಚ್ಚಿ, ಕಿವುಡು ಮಾಡಿತು.

ಮೆಲ್ಲನೆ ಕಷ್ಟದಿಂದುಸಿರೆಳೆಯುತ್ತಾ ಕೊಂಡಯ್ಯನು– 'ಬಂಗಾರವಲ್ಲ?....ಹಾಗಾದರೆ....' ಎಂದನು.

'ಬಂಗಾರವಲ್ಲ. ದೃಢಮಾಡಿಕೊ—ಕಾಗೆ ಬಂಗಾರ....'
ಕೊಂಡಯ್ಯನು ಪುನಃ ಮೆಲ್ಲನೆ....
'ಬಂಗಾರವಲ್ಲ. ಕಾಗೆ ಬಂಗಾರ....ಕಮರಿ....'

೬

ನೂರ ಐವತ್ತು ವರ್ಷಗಳು ಕಳೆದುಹೋದುವು.

ಕಾರುಗಳ್ಳಿ ಮಾರನಾಯಕನು ಒಂದುಸಲ ಕಲ್ಲತ್ತಿಗಿರಿಗೆ ಬೇಟೆಯಾಡುವುದಕ್ಕೆ ಬಂದನು. ದೊಡ್ಡದೊಂದು ಲಾಂಟಾನ ಪೊದರಿನ ನಡುವೆ ಸಣ್ಣ ಬಾಗಿಲೊಂದು ಕಾಣಿಸಿತು. ಆಶ್ಚರ್ಯಗೊಂಡು ಕುತೂಹಲದಿಂದ ಬಾಗಿಲನ್ನು ಬಲವಾಗಿ ತಟ್ಟಿದನು. ಅದು ಮುರಿದು ಬಿದ್ದುಹೋಯಿತು. ಒಳಗೆ ಹೋಗಿ ನೋಡಲು ಮಣ್ಣಿನ ಹುಡಿಯಿಂದ ಅರೆ ಮುಸುಕಿದ್ದ ಚಿನ್ನದ ಪುಡಿಯ ರಾಸಿಯೊಂದು ಕಾಣಿಸಿತು.

ಅದರ ಬಳಿ ಮನುಷ್ಯನ ಅಸ್ಥಿಯೊಂದು ಬಿದ್ದಿದ್ದಿತು. ಕೈಮೂಳೆಗಳು ಇನ್ನೂ ಒಂದು ಕುಡುಗೋಲಿನ ಹಿಡಿಯನ್ನು ಹಿಡಿದಿದ್ದುವು. ಮಾರನಾಯಕನು ಸ್ತಬ್ಧನಾಗಿ ಒಂದು ನಿಮಿಷ ನೋಡಿದನು. ಹಿಂದಿರುಗಬೇಕೆಂದೇ ಅವನ ಮನಸ್ಸು. ಆದರೆ....ಹುಡಿಯು ಬಂಗಾರದ್ದು ಎಂಬುದರಲ್ಲಿ ಸಂದೇಹವಿರಲಿಲ್ಲ. ಆದುದರಿಂದ ಅಸ್ಥಿಯನ್ನು ಕಾಲಿನಿಂದ ಒಂದು ಕಡೆಗೆ ಚಿಮ್ಮಿದನು. ಆ ಪುರಾತನ ಅಸ್ಥಿಯು ಪುಡಿಪುಡಿಯಾಗಿ ಹೋಯಿತು. ಅರೆ ನಿಮಿಷ ಧೂಳು ತುಂಬಿ ಕಣ್ಣು ಕಾಣಿಸದಾಯಿತು.

ಮಾರನಾಯಕನು ಬಗ್ಗಿ ಒಂದು ಹಿಡಿ ಬಂಗಾರದ ಪುಡಿಯನ್ನು ತೆಗೆದುಕೊಂಡು ಮೇಲಿನಿಂದ ಕೆಳಕ್ಕೆ ಸುರಿದನು. ಆ ಹಿರಣ್ಯಧಾರೆಯು ಅಸ್ಪಷ್ಟವಾದ ಬೆಳಕಿನಲ್ಲಿ

ಮಿನುಗಲಾರಂಭಿಸಿತು. ನಾಯಕನ ಎದೆಯು ಅದನ್ನು ನೋಡಿ ಹಿಗ್ಗಿತು.

*   *   *   *

ಈಗ ಕಲ್ಲತ್ತಿಗಿರಿಯಲ್ಲಿ ಚಿನ್ನದ ಹೆಸರೂ ಇಲ್ಲ.



## ತೈಲಚಿತ್ರ ಒಂದು—

ರಾತ್ರಿ ; ಕತ್ತಲು.—ಕಲೋಪಾಸಕನು ತನ್ನ ಕೋಣೆಯಲ್ಲಿ ಏಕಾಂಗಿಯಾಗಿ ಕುಳಿತಿದ್ದಾನೆ. ಕಚ್ಚೆ ಹಾಕಿ ಉಟ್ಟಿರುವ ಪಂಚೆಯು ಬಹಳ ಮಾಸಿದೆ. ಹರಿದು ಹೋದ ಬಿಳಿಯ ಮಲ್ಲಿನ ಷರಟೊಂದನ್ನು ತೊಟ್ಟಿದ್ದಾನೆ. ತಲೆಯಲ್ಲಿನ ಕೂದಲು ಪೊದೆಯಂತೆ ಕೆದರಿದೆ. ಗಡ್ಡಕ್ಕೆ ಅವನು ಗಮನ ಕೊಟ್ಟಂತೆ ಕಾಣುತ್ತಿಲ್ಲ. ವಿಶಾಲವಾದ ಹಣೆಯಲ್ಲಿ ಕೆಲವು ಆಳವಾದ ಗೆರೆಗಳು ತೋರುತ್ತಿವೆ. ಕೆನ್ನೆಗಳು ಗುಳಿಬಿದ್ದು ಮುಖಕ್ಕೆ ಒಂದು ವಿಲಕ್ಷಣತೆಯನ್ನು ಕೊಟ್ಟಿವೆ. ಉದ್ದವಾದ ಮೂಗು. ಕಣ್ಣುಗಳಲ್ಲಿ ತಾಂಡವವಾಡುತ್ತಿರುವ ಕಲಾಪ್ರತಿಭೆಯ ಪ್ರಭೆಯು ಏನನ್ನೋ ನಿರೀಕ್ಷಿಸುವಂತಿದೆ.

ಕೋಣೆಯಲ್ಲಿ ಹಣತೆಯು ಉರಿಯುತ್ತಿದೆ. ಕಲಾವಿದನ ಮುಂಭಾಗದಲ್ಲಿ ಒಂದು ಮುಕ್ಕಾಲುಮಣೆ ಅದರ ಮೇಲೆ ಅಗಲವಾದ ವೇಶ್ಮವನ್ನು ಅಂಟಿಸಿದೆ. ಕೋಣೆಯು ಕೊಳಕು ಕೊಳಕಾಗಿದೆ. ಅವನ ಕಾಲಿನ ಬಳಿ ಬಗೆ ಬಗೆಯ ಬಣ್ಣಗಳಿಂದ ತುಂಬಿದ ಬಟ್ಟಲುಗಳಿವೆ. ಅವುಗಳೊಳಗೆ ಕುಂಚಗಳು ನಾಲ್ಕಾರು ಇವೆ. ಒಂದನ್ನು ಮಾತ್ರ ಕೈಯಲ್ಲಿ ಹಿಡಿದುಕೊಂಡಿದ್ದಾನೆ. ಅದರಿಂದ ಬಣ್ಣವು ಜಿನುಗುತ್ತಿದೆ. ಕಲಾವಿದನು ಯಾವುದೋ ವಿಚಾರದಲ್ಲಿ ಮಗ್ನನಾಗಿ ಬಗೆಹರಿಯದೆ ಕುಳಿತಿದ್ದಾನೆ.

## ತೈಲಚಿತ್ರ ಎರಡು—

ಕಲಾವಿದನ ಹೆಂಡತಿಯು ಅವನ ಪಕ್ಕದಲ್ಲಿ ನಿಂತಿದ್ದಾಳೆ. ಅವಳಲ್ಲಿ ಬಹು ದಿನಗಳಿಂದ ನೆಲೆಸಿದ್ದ, ಕೈಗೂಡದ ಯಾವುದೋ ಆಶೆಯ ಅತೃಪ್ತಭಾವವು ಅವಳ ಮುಖದಲ್ಲಿ ಕಾಣುತ್ತಿದೆ. ರೂಪವತಿ; ಕೋಮಲಕಾಯ; ವಯಸ್ಸು ಹದಿನೆಂಟಕ್ಕೆ ಹೆಚ್ಚಾಗಿಲ್ಲ. ತೆಳ್ಳಗಿರುವ ರೋಜಾಬಣ್ಣದ ಸೀರೆಯನ್ನು ಉಟ್ಟಿದ್ದಾಳೆ. ಗಂಡನ ಗಲ್ಲವನ್ನು ಹಿಡಿದು ಏನನ್ನೊ ಬೇಡುತ್ತಿದ್ದಾಳೆ. ಅವನು ಮಾತ್ರ ಅವಳಿಗೆ ಗಮನ ಕೊಡದೆ ಕುಳಿತಿದ್ದಾನೆ.

## ತೈಲಚಿತ್ರ ಮೂರು—

ರಾತ್ರಿ. ಹಣತೆಯು ಉರಿಯುತ್ತಿದೆ. ಕೋಣೆಯ ಬಾಗಿಲು ಮುಚ್ಚಿದೆ. ಕಲಾವಿದನು ಒಂಟಿಯಾಗಿ ಕುಳಿತಿದ್ದಾನೆ. ಪಂಚೆಯ ಮೇಲೆ ಬಣ್ಣಬಣ್ಣಗಳ ಕರೆಗಳು. ಕೈಯಲ್ಲಿ ಕುಂಚ. ಮಂಡಿಯೂರಿ ವೇಶ್ಮದ ಮುಂದೆ ಕುಳಿತಿದ್ದಾನೆ. ಗಮನವು ಕಿಟಕಿಯ ಕಡೆಗೆ ಹೋಗಿದೆ. ಹೊರಗೆ ಮಳೆಗರೆಯುತ್ತಿದೆ. ಆಗತಾನೆ ಹೊಳೆದ ಮಿಂಚಿನ ಬೆಳಕು ಕಿಟಕಿಯನ್ನು ಬೆಳಗಿಸಿದೆ. ಕಿಟಕಿಯಾಚೆ ಕಲಾವಿದನ ಹೆಂಡತಿಯು ಮಳೆಯಲ್ಲಿ ನೆನೆಯುತ್ತಾ ನಡುಗುತ್ತ ನಿಂತಿದ್ದಾಳೆ. ಮುಂದಲೆಯಿಂದ ಧಾರಾಕಾರವಾಗಿ ನೀರು ಸುರಿಯುತ್ತಿದೆ. ಈ ನೋಟವು ಅವನ ಕಣ್ಣನ್ನು ಸೆಳೆದಿದೆ. ಮುಖವು ವ್ಯಗ್ರವಾಗಿ, ಕಣ್ಣು ಹನಿಗೂಡಿದೆ.

## ತೈಲಚಿತ್ರ ನಾಲ್ಕು—

ಕಲಾವಿದನ ಹೆಂಡತಿಯ ಮುಖದಲ್ಲಿ ಅಪೂರ್ವವಾದ ಬದಲಾವಣೆ. ಕೋಪ, ಜುಗುಪ್ಸೆ, ಕಾಮಗಳು ಒಮ್ಮುಖವಾಗಿ ಉದ್ಭವಿಸಿವೆ. ಮನೆಯ ಬಾಗಿಲ ಹೊರಗೆ ಒಬ್ಬಳೇ ನಿಂತಿದ್ದಾಳೆ. ಬಿಸಿಲೇರಿದ ಹೊತ್ತು. ಅವಳ ಎದೆಯ ಮೇಲಿನ ಸೆರಗು ಜಾರಿದೆ. ಮನೆಯ ಮುಂದೆ ದೊಡ್ಡ ರಸ್ತೆ. ಎರಡು ಪಕ್ಕಗಳಲ್ಲಿಯೂ ಹಸುರು ಗಿಡಗಳು. ಕಲಾವಿದನ ಹೆಂಡತಿಯು ಯಾರನ್ನೋ ಎದುರು ನೋಡುತ್ತಿರುವಂತಿದೆ.

## ತೈಲಚಿತ್ರ ಐದು—

ಕಲಾವಿದನ ಹೆಂಡತಿಯು ಗಾಢಾಲಿಂಗನದಲ್ಲಿ ಮೈಮರೆತಿದ್ದಾಳೆ. ಆನಂದಪರವಶತೆಯಿಂದ ಕಣ್ಣುಗಳು ಅರ್ಧ ನಿಮೀಲಿತವಾಗಿವೆ. ಕೊರಳ ಹಾರವು ಕಡಿದು ಕೆಲವು ಮುತ್ತುಗಳು ಜಾರಿವೆ. ಅವಳ ಮುಖದಲ್ಲಿ ಶಾಂತತೆಯು ಕೊಂಚಕೊಂಚವಾಗಿ ಮೂಡುತ್ತಿದೆ. ಯುವಕನು ಮಹಾ ಕುರೂಪಿ ಬಣ್ಣದಲ್ಲಿ ಕಪ್ಪು. ಆಳು ಎತ್ತರವಾಗಿದ್ದಾನೆ.

## ತೈಲಚಿತ್ರ ಆರು—

ಮನೆಯ ಹಜಾರ. ಮೂಲೆಯಲ್ಲಿ ಒಂದೆರಡು ಪಾತ್ರೆಗಳು. ಕಲಾವಿದನು ಕುರ್ಚಿಯಲ್ಲಿ ಕುಳಿತು ತಿಂಡಿಯನ್ನು ತಿನ್ನುತ್ತಿದ್ದಾನೆ. ಮುಖವು ಗಂಭೀರವಾಗಿದೆ. ಪಕ್ಕದಲ್ಲಿ

ಹೆಂಡತಿಯು ಪಂಚಪಾತ್ರೆಯೊಂದರಲ್ಲಿ ನೀರು ಹಿಡಿದು ನಿಂತಿದ್ದಾಳೆ. ಅವಳ ಕಂಕುಳಲ್ಲಿ ಒಂದು ಗಂಡು ಕೂಸು. ಅವಳ ಮನದಲ್ಲಿನ ಸಾಹಸವು ಮುಖದಲ್ಲಿ ಸಂತೋಷವಾಗಿ ಪರಿಣಮಿಸಿದೆ.

## ತೈಲಚಿತ್ರ ಏಳು—

ಕಲಾವಿದನ ಕೋಣೆ. ಒಳಗೆ ಅವನಿಲ್ಲ. ಹೆಂಡತಿಯು ಮೆಲ್ಲನೆ ಒಳಕ್ಕೆ ಬಂದಿರುವಳು. ನೆಲದ ಮೇಲೆ ಎಲ್ಲೆಲ್ಲಿಯೂ ಸುರಿದಿರುವ ಬಣ್ಣಗಳ ಗುರುತು. ಅವಳ ದೃಷ್ಟಿಯು ತೈಲಚಿತ್ರಗಳ ಕಡೆಗೆ ಹೋಗಿದೆ. ಮುಖದಲ್ಲಿ ಒಂದು ವಿಲಕ್ಷಣ ಭಾವವು ಛಾಯೆಗೊಂಡಿದೆ. ಕೆನ್ನೆಗಳು ಬೆದರಿ ಕೆಂಪಾಗಿವೆ.

## ತೈಲಚಿತ್ರ ಎಂಟು—

ಮನೆಯ ಅಂಗಳದಲ್ಲಿ ಕಲಾವಿದನು ಚಾಪೆಯ ಮೇಲೆ ಕುಳಿತು ಏನನ್ನೋ ಕುಡಿಯುತ್ತಿದ್ದಾನೆ. ಕಣ್ಣೆವೆಗಳು ಕೊಂಚ ಕೊಂಚವಾಗಿ ಮುಚ್ಚುತ್ತಿವೆ. ಮುಖದಲ್ಲಿ ನರಗಳು ಬಿಗಿದುಕೊಂಡಿವೆ. ಎಡಗೈ ಮುಷ್ಟಿ ಬಿಗಿಯಾಗಿದೆ.

## ತೈಲಚಿತ್ರ ಒಂಭತ್ತು—

ಕಲಾವಿದನು ಮಂಚದ ಮೇಲೆ ವಿಕಾರವಾಗಿ ಸತ್ತು ಬಿದ್ದಿದಾನೆ. ಒಂದು ಕಾಲು ಕೆಳಗೆ ಜಾರಿದೆ. ಕಣ್ಣು ಗುಡ್ಡೆಗಳು ಹೊರಕ್ಕೆ ಬಂದಿವೆ. ಕೈಯಲ್ಲಿ ಒಂದು ಕುಂಚ

ವಿದೆ. ತಲೆಗೂದಲು ಹಣೆಯ ಮೇಲೆ ಬಿದ್ದಿದೆ. ಸ್ವಲ್ಪ ತೆರೆದಿರುವ ಬಾಯಿಂದ ಜೊಲ್ಲು ಸುರಿದಿದೆ. ಉಟ್ಟಿರುವ ಪಂಚೆಯು ಸಡಿಲವಾಗಿದೆ. ಕೈಗೂಡಿದ ಕಲಾಪರಿಪೂರ್ಣತೆಯು ಮುಖದಲ್ಲಿ ಸ್ಥಿರವಾಗಿ ನೆಲೆಸಿದೆ.

*    *    *    *

ತರುಣಿಯೊಬ್ಬಳು ನಡುನಡುಗುತ್ತ ಮೆಲ್ಲನೆ ಕೋಣೆಯೊಳಕ್ಕೆ ಬಂದಳು. ಎಂದಿನಂತಿಲ್ಲದೆ ಇಂದು ಕೋಣೆಯ ಬಾಗಿಲಿಗೆ ಬೀಗ ಹಾಕಿರಲಿಲ್ಲ. ಮನೆಯಲ್ಲಿ ಗಂಡನಿರಲಿಲ್ಲ. ಮುಕ್ಕಾಲುಮಣೆಯ ಮೇಲಿಟ್ಟಿದ್ದ ತೈಲಚಿತ್ರಗಳ ಕಡೆ ತಿರುಗಿದಳು. ಸುತ್ತಮುತ್ತ ನೋಡಿ, ಆತುರ ಕುತೂಹಲಗಳಿಂದ ಚಿತ್ರಗಳನ್ನು ಒಂದೊಂದಾಗಿ ನೋಡಿದಳು. ಮುಖದಲ್ಲಿ ಬಗೆದಿರುವ ಭಯದ ಮರೆಯಲ್ಲಿ ಮನೋವೇದನೆಯು ಕಾಣವಂತೆ ಅಡಗಿತ್ತು.—ಕ್ಷಣಕ್ಷಣಕ್ಕೂ ವೇದನೆಯು ಹೆಚ್ಚಾಯಿತು. ಒಂದು ಕೈಯಿಂದ ಎದೆಯನ್ನು ಅದುಮಿಕೊಂಡು ಎದ್ದುನಿಂತಳು. ಮುಖವು ಹುಚ್ಚುಹುಚ್ಚಾಗಿತ್ತು. ಕಣ್ಣಿಗೆ ಕತ್ತಲು ಕವಿದಂತಾಯಿತು. ಕೈಕಾಲುಗಳಲ್ಲಿ ನಡುಕ ಹುಟ್ಟಿ ಕುಸಿಯುವಂತಾಯಿತು. "ಅಯ್ಯೋ" ಎಂದು ಚೀರಲು ಪ್ರಯತ್ನಿಸಿ, ಚೀರದೆಯೇ ಕುಸಿದುಬಿದ್ದಳು.

ಕಲಾವಿದನು ಮರೆಯನ್ನು ಬಿಟ್ಟು ಹೊರಕ್ಕೆ ಬಂದನು. ಮುಖದಲ್ಲಿ ಮರುಕದೊಂದಿಗೆ ಹೆಮ್ಮೆಯೂ ಮೂಡಿತ್ತು.



# ಹುಚ್ಚ



"He is mad as a hare, poor fellow,
   And should be in chains" you say.
I haven't a doubt of your statement,
   But who isn't mad, I pray?
Why, the world is a great asylum,
   And people are all insane,
Gone daft with pleasure and folly,
   Or crazed with passion and pain.

—E. W. W.

"ಆತನ್ನ ಬಹಳ ಎಚ್ಚರಿಕೆಯಿಂದ ಎಳೆಗೂಸಿನಂತೆ ನೋಡಿಕೋಬೇಕು. 'ಹಾರ್ಟ್' ಬಹಳ 'ವೀಕಾ'ಗಿದೆ ಸ್ವಲ್ಪ ಏನಾದರೂ ಮನಸ್ಸಿಗೆ ನೋವಾದರೆ ಪುನಃ ಹುಚ್ಚು ಹಿಡಿದರೂ ಹಿಡೀಬಹುದು....ಇಲ್ಲಾ....ಪ್ರಾಣಾಪಾಯ ವಾದರೂ ಆಗಬಹುದು....ತಿಳೀತೆ?"

"....ಹೂಂ ...ಸಾರ್."

"ನೀವೊಬ್ಬರೇನೋ....ಅವರಿಗೆ ಮಕ್ಕಳು?"

"ಇಲ್ಲ ಸಾರ್....ನನ್ನ ತಂಗೀ ಒಬ್ಬಳಿದ್ದಾಳೆ."

"ಹುಂ....ಸರಿ....ಟೇಕ್ ಗುಡ್ ಕೇರ್ ಆಫ್ ಹಿಮ್."

"ಆಗಲಿ ಸಾರ್."

'ಡ್ಯೂಟಿ' ಡಾಕ್ಟರು ಮೇಜಿನ ಮೇಲಿದ್ದ 'ಕಾಲಿಂಗ್ ಬೆಲ್ಲ'ನ್ನು ಒತ್ತಿದರು. ಕೂಡಲೆ ಒಬ್ಬ 'ವಾರ್ಡ್ ಬಾಯ್' ಬಂದ.

"....೧೩ನೇ ನಂಬರ್‌ನ ಇವರ ವಶಕ್ಕೆ ಕೊಡೊ—" ಎಂದು, ಬಂದಿದ್ದವನ ಕಡೆಗೆ ತಿರುಗಿ—"ಬೇರೆ ಬಟ್ಟೆ ತಂದಿದ್ದೀರಾ...." ಎಂದ. ಬಂದಿದ್ದವನು ಉತ್ತರವೀಯದೆ ಕೈಲಿದ್ದ 'ಹ್ಯಾಂಡ್ ಬ್ಯಾಗೊ'ಂದನ್ನ ವಾರ್ಡ್‌ಬಾಯ್‌ಗೆ ಕೊಟ್ಟ.

"....ಹಿಂಗ್ ಬನ್ನೀ ಸೋಮಿ," ಎಂದ ಆಳು. ಬಂದಿದ್ದಾತನು ಆಳನ್ನು ಅನುಸರಿಸುತ್ತ "....'೧೩ನೇ ನಂ

ಬರ್'ನ.....ನಂಬರು.....ಹುಂ....." ಎಂದುಕೊಂಡು ಹೋದ.

*  *  *  *

ಇಬ್ಬರು ಮುದುಕರು, ತಾವು ತೊಟ್ಟಿದ್ದ 'ಬನಿಯ'ನ್ನುಗಳನ್ನು ನೆಲದ ಮೇಲೆ ಹರವಿ ಬಿಸಿಲು ಕಾಯಿಸುತ್ತ ಯಾವುದೋ ಮಾತಿನಲ್ಲಿ ಮುಳುಗಿ ಒಂದೆಡೆ ಕುಳಿತಿದ್ದರು. ಅವರಿದ್ದ ಅಂಗಳವನ್ನು ಚಕ್ರಾಕಾರವಾಗಿ ಕಬ್ಬಿಣದ ಹಂಜರವು ಸುತ್ತಿದ್ದಿತು. ಒಂದು ಕಡೆ ಒಂದು ಸಣ್ಣ 'ಬೋರ್ಡು' ಅದರ ಮೇಲೆ '೭' ಎಂದಿದ್ದಿತು. ಇನ್ನೊಂದು ಕಡೆ ಇನ್ನೊಂದು ಸಣ್ಣ 'ಬೋರ್ಡು' ಅದರ ಮೇಲೆ '೧೩' ಎಂದಿದ್ದಿತು. ಏಳನೆಯವನು ಕೇಳಿದ:—"ಇನ್ನೂ ನಿನ್ನನ್ನು ಯಮ ಬಂದು ನೋಡಲಿಲ್ಲವೆ ಇವತ್ತು?"

"ಬೆಳಿಗ್ಗೆಯೇ ಬಂದಿದ್ದ. ಬಂದು ಏನೋ ಹುಚ್ಚುಚ್ಚಾಗಿ ಮಾತಾಡಿಬಿಟ್ಟು ಹೋದ" ಎಂದ ಹದಿಮೂರನೆಯವನು.

"ಏನೆಂದ?"

"ಇವತ್ತು ನನ್ನ ಕರಕೊಂಡು ಹೋಗ್ತಾರೆ ನನ್ನ ಮನೆಯೋರು ಅಂದ."

"ಓ....ಹಾಗಾದ್ರೆ ಹೋಗ್ಬಿಡ್ತಿ....ನಿಮ್ಮನೇಗೆ?"

"ಹುಚ್ಚಾ—ನಮ್ಮನೆ ಯಾವ್ದಿದೆಯೋ ಹೋಗೋಕೆ, ಬೇರೆ—ಇದನ್ಬಿಟ್ಟು. ನಮ್ಮೋರು?....ನನ್ನ ಮನೆಯೋರಂತೆ....ನನ್ನ ಮನೆಯೋರು....ಯಾರೋ ಅದು, ನೀವಲ್ವೆ? ನನ್ನ ಮನೆ ಇದು. ನನ್ನೋರು....ನೀನು

....ಅಗೋ ಅಲ್ಲಿ ಲ್ಲಾ ಬಿದ್ಕೊಂಡಿರೋರು....ಏನೋ ಅವನಿಗೆ ಬುದ್ಧಿ ಸ್ವಾಧೀನವಿಲ್ದೆ ಅಂದಾಂತ ಅದನ್ನೇ ನಂಬೋದ ? "

" ಹುಷ್....ಮೆಲ್ಲಗೆ ಮಾತಾಡು....ಹಾಗೆಲ್ಲ ಅನ್ಬೇಡ ....ಯಾರ್ಗಾದ್ರೂ ಕೇಳಿಸ್ತೊಂದ್ರೆ ಹುಚ್ಚಾಂ ದಾರು ನನ್ನ."

" ಒಳ್ಳೆ ತಮಾಷೆ ಅಲ್ವೆ....ಯಾರಾದ್ರೂ ಹಾಗಂದ್ರೆ.... ಬುದ್ಧಿಯಿಲ್ಲದ ಕತ್ತೆಗಳು ! "

" ಸುಮ್ಮನೇ ಇರು. ಯಮದೂತ ಬರ್‍ತಾ ಇದ್ದಾನೆ ....ನಿನ್ನ ಹೊರಕ್ಕೆ ಕಳಿಸೋಕೇಂತ ಕಾಣತ್ತೆ."

" ಹೊರಕ್ಕೆ ?....ಅಲ್ಲ....ಒಳಕ್ಕೆ ಆ ನರಕಕೂಪ ದೊಳಕ್ಕೆ ಕಳ್ಸೋಕೆ ಬರ್‍ತಾ ಇರೋದು" ಎಂದ ಹದಿ ಮೂರನೆಯವನು.

ಆ ವೇಳೆಗೆ ವಾರ್ಡ್ ಬಾಯ್ ಬಂದು ಅವನನ್ನು " ಬಾಯ್ಯ ನಿನ್ಕರಕೊಂಡೋಗಾಕೆ ನಿನ್ಮಗಾ ಬಂದವ್ರೆ " ಎಂದ.

" ನನ್ನ ಮಗ ? ಯಾರು ? ನಂಗೆ ಮಗನೂ ಇಲ್ಲ— ಮೊ...."

" ಊಂ....ಏಳೇಳು. ಪೊತ್ತಾಯ್ತು " ಎಂದ ವಾರ್ಡ್ ಬಾಯ್.

ಹದಿಮೂರನೆಯವನು ಏಳನೆಯವನ ಮುಖ ನೋಡಿ, " ಹೋಗ್ತೀನಿ ...ಮತ್ತೆ ಬರೋಕಾಗತ್ತೊ ಇಲ್ಲವೋ—

ನೋಡೋಣ ಬದ್ಕಿದ್ರೆ;" ಎಂದು ಎದ್ದು, ವಾರ್ಡ್ ಬಾಯ್‌ನ ಹಿಂಬಾಲಿಸಿದ.

* * * *

ತಂದೆ ಮಗ ಇಬ್ಬರೂ ಬಾಗಿಲಿನ ಬಳಿ ಕೂಡಿದರು. ತಂದೆಗೆ ಮಗನನ್ನು ಗುರ್ತಿಸುವುದು ಸುಲಭವಾಗಿತ್ತು. ಆದರೆ ಮಗನಿಗೆ ತಂದೆಯೆನ್ನುವುದು ಬೇಗ ಗುರುತು ಹತ್ತಲಿಲ್ಲ. ಇಬ್ಬರಲ್ಲಿ ಯಾರೂ ಮಾತನಾಡದೆ ಸ್ವಲ್ಪ ದೂರ ನಡೆದರು. ಆಮೇಲೆ ಮಗನೇ—

"ಅಪ್ಪಾ! ಗಾಡೀ ಮಾಡ್ತೀನಿ....ಸ್ವಲ್ಪ ತಾಳು" ಎಂದ.

"........ಆ....ಏನು?....ಗಾಡೀ?" ಎಂದುಕೊಂಡು ಹಾಗೇ ಮೊದಲಿನಂತೆ ತಲೆತಗ್ಗಿಸಿಕೊಂಡು ಹೊರಟ—ತಂದೆ. ಮಗನಿಗೆ ಹೆಚ್ಚು ಒತ್ತಾಯ ಮಾಡುವುದಕ್ಕೆ ಧೈರ್ಯ ಸಾಲಲಿಲ್ಲ.

ಮನೆಯು ಸಮೀಪಿಸಿದಂತೆ ಹುಚ್ಚನ ಮನಸ್ಸಿನಲ್ಲೊಂದು ಆಸೆಯು ಹೆಚ್ಚಿ ತಾಯಿಯಿಲ್ಲದ ಅವನ ನಚ್ಚಿನ ಮಗಳನ್ನೂ ಅವಳ ಹಿಂದಿನ ಆಟಸಾಟಗಳೆಲ್ಲವನ್ನೂ ನೆನಪು ಮಾಡಿಕೊಟ್ಟು ಅವನ ಹೆಜ್ಜೆಯ ಗತಿಯನ್ನು ಹೆಚ್ಚಿಸುತ್ತಿತ್ತು. 'ತನ್ನವಳ ನೆನಪಾಗಿ' ಉಳಿದಿದ್ದ ಅವನ ಒಬ್ಬಳೇ ಮಗಳು ಅವನ ಜೀವವಾಗಿದ್ದಳು.

ಮನೆಯನ್ನು ಸಮೀಪಿಸುತ್ತಲೇ ಅಕ್ಕಪಕ್ಕದ ಮನೆಯ ಹುಡುಗರು ಇದ್ದಕ್ಕಿದ್ದಂತೆ

"ಅಗೋ—ಹುಚ್ಚ....ಹುಚ್ಚ ಹೋಗ್ತಾ ಇದ್ದಾನೆ. ನೋಡ್ರೋ" ಎಂದು ಕೂಗಿಕೊಂಡರು. ಅದನ್ನು ಕೇಳಿ

ಮಗನ ಜೀವವು ನೊಂದು ಅವನ ಮುಖವು ಸಂಕಟ ದಿಂದ ಕೆಂಪೇರಿತು. ತಂದೆಯು ಮೆಲ್ಲನೆ ಮಗನ ಮುಖ ನೋಡಿ ಒಂದು ನಿರ್ಲಕ್ಷ್ಯವಾದ ನಗೆಯನ್ನು ತೇಲಿ ಬಿಟ್ಟು, "ಹಯ್ಯೋ—ಹುಚ್ಚ......." ಎಂದು ಮನೆಯ ಒಳಹೊಕ್ಕನು.

ಒಳಗೆಲ್ಲವೂ ಹೊಸದಾಗಿ ಕಂಡಿತು. ತನಗೆ ಪರಿ ಚಯವಿದ್ದ ವಸ್ತುಗಳು ಯಾವುವೂ ಕಣ್ಣಿಗೆ ಬೀಳಲಿಲ್ಲ. ಎಲ್ಲವೂ ಬದಲಾಗಿದ್ದುವು. ಆದರೇನು? ಯಾವುದು ಹೇಗಾದರೂ ತನ್ನ ಮಗಳು, ಮುದ್ದು ಮಗಳು ಎಂದಿಗೂ ಮೊದಲಿನಂತೆಯೇ ಇರುವಳು—ಎಂದವನ ಭಾವನೆ, ಅದು ಸುಳ್ಳಾಗದು....ತನ್ನ ಕೊಠಡಿಗೆ ಹೋದ. ಅಲ್ಲೂ ಬದಲಾವಣೆ. ಒಂದು ಕಾಲದಲ್ಲಿ ಆ ಕೋಣೆ ತನ್ನದಾ ಗಿತ್ತು. ಈಗ ಅದರಲ್ಲಿ ತನ್ನದೆನ್ನುವ ವಸ್ತು ಯಾವುದೂ ಇರಲಿಲ್ಲ. ಎಲ್ಲವೂ ಮಗನದು. ತನ್ನ ಸ್ಥಳದಲ್ಲಿ ಮಗ ನಿದ್ದ.—ಸಹಜವೇ. ಯಾರು ಸ್ಥಿರ?

ಹಾಗೆಯೇ ಅಲ್ಲಿದ್ದ ಸಾಮಾನುಗಳ ಮೇಲೊಂದು ಸಲ ದೃಷ್ಟಿ ಹೋಯಿತು. ಮುಖದಲ್ಲಿ ಸ್ವಲ್ಪ ಸಂತೋ ಷವು ಮೂಡಿತು.

"ಹುಂ—ಇದೆ—ಇದೆ—ನನ್ನದೊಂದಾದರೂ ಇದೆ" ಎಂದುಕೊಂಡು ಗೋಡೆಯ ಗೂಡಿನಲ್ಲಿದ್ದುದೊಂದು 'ಫೋಟೋ-ಆಲ್ಬಮ್' ಕೈಗೆ ತೆಗೆದುಕೊಂಡು ಬಿಚ್ಚುತ್ತಾ....ಹಾಗೆಯೇ ಕುಳಿತುಕೊಂಡ....

ಒಂದು ಕ್ಷಣ ಮುಖವು ಗಂಭೀರವಾಯಿತು. ಮೊದ ಲನೆಯದು ತನ್ನ ತಂದೆತಾಯ್ಗಳದು. ಆಮೇಲೆ ಎರಡ

ನೆಯ ಚಿತ್ರ ನೋಡಿ ಒಂದು ಮೆಲುನಗೆ ನಕ್ಕ. ಎಳೆತನದ ಚಿತ್ರವೊಂದು ಕಣ್ಣಿಗೆ ಕಟ್ಟಿತು. ಮುಖ, ಕೈ, ಬಟ್ಟೆಗಳಿಗೆಲ್ಲ ತಾನು 'ಬೂಟ್ ಪಾಲಿಷ್' ಬಳಿದುಕೊಂಡಿದ್ದುದು. ಅದನ್ನು ತನ್ನ ತಾಯಿಯು ಕಂಡು ಗದರಿದ್ದು; ತಂದೆ ನಕ್ಕು, ಓಡಿ ಹೋಗಿ 'ಕ್ಯಾಮರ'ವನ್ನು ತಂದು ಆಗ ತನ್ನ 'ಫೋಟೊ' ತೆಗೆದದ್ದು; ಎಲ್ಲವೂ ನೆನಪಾಯಿತು. ಹಾಗೆಯೇ ಚಿತ್ರಗಳನ್ನೂ ನೋಡುತ್ತಾ ಹೋದ. ತಾನು 'ಕಾಲೇಜಿ'ಗೆ ಹೊಸದಾಗಿ ಸೇರಿದ ದಿನ ತೆಗೆಸಿಕೊಂಡಿದ್ದ ಚಿತ್ರವೊಂದು ಕಾಣಿಸಿತು. ಕದ್ದು ತೆಗೆಸಿಕೊಂಡಿದ್ದ 'ಫೋಟೋ' ಅದು. ಮುಖದಲ್ಲಿ ಆ ದಿನದ ಹೆಮ್ಮೆ—ಏನೋ ಒಂದು ಬಗೆಯ ಸಂತೋಷ—ಇನ್ನೂ ಅಚ್ಚಳಿಯದಿತ್ತು. ಆಮೇಲೆ ತನ್ನ ಮದುವೆಯ ಚಿತ್ರ; ತಾನೂ ತನ್ನವಳೂ. ಹೌದು; ಆ ದಿನವೇ ಮೊದಲನೆಯ ಸಲ ಅವಳೊಂದಿಗೆ ಮಾತನಾಡಿದ್ದು. 'ಇನ್ನೂ ಹತ್ತಿರ ಬಾ' ಎಂದಿದ್ದ. ಹೌದು—ಹಾಗೆಂದ ಮೇಲೆ ಮೈಯೆಲ್ಲವೂ ಏಕೋ ಬೆವತುಬಿಟ್ಟಿತು. ಹೃದಯದಲ್ಲಿ ಹಿಡಿಸಲಾರದಷ್ಟು ಸಂತೋಷವೂ ತುಂಬಿಬಿಟ್ಟಿತು. ಅವಳೂ ಆಗ ನಾಚಿಕೆಯಿಂದ ತಲೆಯನ್ನು ಎಷ್ಟು ತಗ್ಗಿಸಿಬಿಟ್ಟಳು—! ಆಮೇಲೆ ಮಗನ ಎಳೆತನದ 'ಫೋಟೋ'ಗಳು. ಅವು ಅಷ್ಟಾಗಿ ರುಚಿಸಲಿಲ್ಲ. ಹಾಳೆಗಳನ್ನು ಮಗುಚಿಹಾಕಿದ. ಹುಂ!—ಸಿಕ್ಕಿತು....'ಬೇಬಿ'ಯ ಚಿತ್ರಗಳು. ಒಂದನ್ನೊಂದು ಮೀರಿಸುತ್ತಿದ್ದುವು. ಅವಳ ಮುಖದಲ್ಲಿ ಏನು ತುಂಟತನ—ಆ ನಗು—ಆ ಗುಂಗುರು ಕೂದಲು ಮುಖದ ಮೇಲೆ ಇಳಿಬಿದ್ದು ಅವಳ

ಸೌಂದರ್ಯವನ್ನು ಎಷ್ಟು ಹೆಚ್ಚಿಸಿತ್ತು. ಅಬ್ಬ—ಆ 'ಫೋಟೋ'ಗಳನ್ನು ತೆಗೆಯುವುದಕ್ಕೆ ಅವಳು ಸರಿಯಾಗಿ ಒಂದು ಕ್ಷಣವೂ ಕೂಡದೆ ಎಷ್ಟು ಹಿಂಸೆಕೊಟ್ಟಳು. ಈಗ ಅವೆಲ್ಲವನ್ನೂ ನೆನೆದು ಅವನಿಗೆ ತಡೆಯುಲಾರದ ನಗು ಬಂದಿತು. ಕಾಲವೂ ಹೊರಳಿತ್ತು; ಹಾಳೆಗಳೂ ಹೊರಳಿದುವು....ಮುಖದಲ್ಲಿ ಮೂಡಿದ್ದ ನಗುವು ಹಾಗೆಯೇ ಮಾಯವಾಯಿತು....ಅಷ್ಟೆ! ಅವನ ಪಾತ್ರ ವೆಷ್ಟೋ ಅಷ್ಟೆ....ಇನ್ನು ಮುಂದಿದ್ದ ಚಿತ್ರಗಳೆಲ್ಲವೂ ಮಗ ನವು, ಮಗನ ಹೆಂಡತಿಯವು. 'ಆಲ್ಬಮು'ನ್ನು ಮತ್ತೆ ಅದರ ಸ್ಥಳದಲ್ಲಿರಿಸಿ 'ಹುಂ' ಎಂದುಕೊಂಡು ಒಂದು ಕ್ಷಣ ಕಿಟಕಿಯಿಂದಾಚೆಗೆ ಶೂನ್ಯದೃಷ್ಟಿಯನ್ನು ಬೀರಿ ದನು.

ಇದ್ದಕ್ಕಿದ್ದ ಹಾಗೆಯೇ ನೆನಪಾಯಿತು. ತಾನು ನೋಡಬೇಕೆಂದಿದ್ದುದು ಮಗಳನ್ನು, 'ಬೇಬಿ'ಯನ್ನು: ತನ್ನ ಮುದ್ದಿನ ಗಿಳಿಯನ್ನು....'ಅವಳ' ನೆನಪಾಗಿದ್ದ 'ಬೇಬಿ'ಯನ್ನು.

ಇನ್ನು ಅಲ್ಲಿ ಹೆಚ್ಚು ಹೊತ್ತು ನಿಲ್ಲುವುದಾಗಲಿಲ್ಲ. ಮಗಳನ್ನು ಹುಡುಕಿಕೊಂಡು ಮನೆಯ ಒಳಭಾಗಕ್ಕೆ ಹೋದ. ಅವಳನ್ನೆತ್ತಿ ಮುದ್ದಾಡಬೇಕೆಂಬ ಆಶೆ ಅವ ನನ್ನು ಕಳ್ಳನಂತೆ ನಡೆಯಿಸಿತು. ನಡುಮನೆಯಲ್ಲಿ 'ಬೇಬಿ'ಯು ಆಡುತ್ತಾ ಕುಳಿತಿದ್ದಳು. ಎದೆಯು ಆನಂದದಿಂದ ಹಿಗ್ಗಿತು. ಹೌದು—ಆ ಮುಂಗುರುಳು, ಗುಂಗುರು ಕೂದಲುಗಳೆಷ್ಟು ಅವಳ ಸೌಂದರ್ಯವನ್ನು ಹೆಚ್ಚಿಸುತ್ತಿತ್ತು. ಓಡಿಹೋಗಿ 'ಬೇಬಿ' ಎಂದು ಎತ್ತಿ

ಕೊಂಡ. ಮಗುವು ಹೊಸ ಮುಖವನ್ನು ಕಂಡು, ಕಿಟಾರನೆ ಕಿರಚಿತು. ಸಮಾಧಾನಮಾಡಲೆತ್ನಿಸಿದ್ದು ವಿಫಲವಾಯಿತು. ಮಗನ ಹೆಂಡತಿ ಓಡಿಬಂದು ಮಗುವನ್ನು ಕಿತ್ತುಕೊಂಡಳು. ಇವನು ತಪ್ಪುಮಾಡಿ ಸಿಕ್ಕಿಬಿದ್ದ ಹುಡುಗನಂತೆ ತಲೆತಗ್ಗಿಸಿಕೊಂಡು ನಿಂತ. ಅವಳು, ಮಗುವನ್ನು ಸೆರಗಿನಲ್ಲಿ ಮುಚ್ಚಿಕೊಂಡು ಒಳಕ್ಕೆ ಹೊರಟು ಹೋದಳು. ಇವನಿಗೆ ಅರ್ಥವಾಗಲಿಲ್ಲ. ಅದೇ ಗುಂಗುರು ಕೂದಲು, ಅದೇ ವಯಸ್ಸು, ಆದರೂ ತನ್ನ ಮುಖವನ್ನು ನೋಡುತ್ತಲೇ ಕಿರಚಿತು. 'ಬೇಬಿ'ಯು ಹಿಂದೆಂದೂ ಹೀಗೆ ಕಿರಿಚಿದ್ದಿಲ್ಲ...

....ಈಗ ಸ್ವಲ್ಪ ಹೊಳೆಯಿತು.—ಇದು ಮಗನ ಮಗು. ತನ್ನ 'ಬೇಬಿ'ಯಲ್ಲ...."ಓ! ತಾನೆಂಥ ಹುಚ್ಚ. ಎಷ್ಟು ವರ್ಷಗಳಾಗಿವೆ? ಈಗ ಅವಳು ಎಷ್ಟಿಲ್ಲವೆಂದರೂ ಹತ್ತು–ಹನ್ನೆರಡು ವರುಷದವಳಾಗಿರಬೇಕು. ತಾನು ಮನೆಯನ್ನು ಬಿಟ್ಟು ಎಂಟು ವರ್ಷಗಳಾಗಿರಬೇಕು ತನ್ನ ಬೇಬಿ. ನೋಡೋಣ, ಒಳಗಿರಬಹುದು" ಎಂದುಕೊಂಡ. ನಡುಮನೆಯಿಂದ ಅಂಗಳಕ್ಕೆ ಹೋಗಬೇಕೆಂದಿದ್ದವನನ್ನು ಮಗನ ಹೆಂಡತಿಯ ಮಾತು ಹೊಡೆದು ನಿಲ್ಲಿಸಿತು. ಮಗನೂ ಅವಳೂ ಅಡುಗೆಮನೆಯಲ್ಲಿ ಮಾತನಾಡುತ್ತಿದ್ದರು.

"....ಕರ್‍ಕೊಂಬರ್‍ಬೇಕಾಗಿತ್ತೇ. ಅಲ್ಲೇ ಬಿಟ್ಟಿದ್ರೆ ಆಗ್ತಿರ್‍ಲಿಲ್ವೆ? ಮಧ್ಯಾಹ್ನ ನೀವು ಆಫೀಸಿಗೆ ಹೊರಟ್ಹೋಗ್ತೀರಿ. ಅವಳು 'ಸ್ಕೂಲಿ'ಗೆ ಹೋಗ್ತಾಳೆ. ಮನೇಲಿ ನಾನೂ, ಮಗು; ಇವ್ರೇನಾಗ್ಬೇಕು? ಪ್ರಾಣಾ ತೆಗೆದ್ರೂ ಕೇಳೋ

ರಿರೊಲ್ಲ."

"ನಾನೇನು ಬೇಕೂಂತ ಭ್ರಮೆಪಟ್ಟು ಕರ್ಕೊಂಬಂದ್ನೆ? ಡಾಕ್ಟ್ರು ಬರೆದಿದ್ದರು, 'ಇವತ್ತು ಕರಕೊಂಡ್ಹೋಗಿಬಿಡಿ—ಸ್ವಲ್ಪ ಮೇಲು—ಇಲ್ಲೂ ಬಹಳ ದಿವ್ಸ ಇಟ್ಕೊಂಡಿರೋಕಾಗೊಲ್ಲ' ಅಂತ. ಅದಕ್ಕೋಸ್ಕರ ಕರಕೊಂಡು ಬಂದೆ.... ಎಲ್ಲಾ ನನ್ನ ಕರ್ಮ."

ಇನ್ನು ಹೆಚ್ಚು ನಿಂತು ಕೇಳುವುದಾಗಲಿಲ್ಲ. "ಹುಂ.... ಅಷ್ಟೆ...." ಎಂದು ಮುಂದೆ ಹೊರಟ. ಮತ್ತೆ ಮಗಳನ್ನು ನೋಡುವ ಕುತೂಹಲ ಮುಂದಕ್ಕೆ ತಳ್ಳಿತು.

ಆಗತಾನೆ ಮಗಳು ಊಟಮಾಡಿ ಕೈತೊಳೆದು ಒಂದು ಕೈಯಲ್ಲಿ ತಟ್ಟೆ ಹಿಡಿದುಕೊಂಡು ಮತ್ತೊಂದರಲ್ಲಿ ಬಾಯಿ ಒರಸಿಕೊಳ್ಳುತ್ತ ಒಳಕ್ಕೆ ಬರುತ್ತಿದ್ದಳು. ತಂದೆ ಇದ್ದಕ್ಕಿದ್ದಂತೆ ಎದುರಿಗೆ ನಿಂತು ಕೈಚಾಚಿ—"ಮಗೂ, 'ಬೇಬಿ'"—ಎಂದ. ಮಗಳು ಗಾಬರಿಯಿಂದ ತಟ್ಟೆಯನ್ನು ಕುಕ್ಕಿ ಮೆಲ್ಲನೆ ಹಿಂದುಹಿಂದಕ್ಕೆ ಸರಿದಳು. ಆದರೂ ನಿರಾಶನಾಗದೆ ಬಳಿಗೆ ಹೋದ. ಮಗಳು ಕೂಗಿಕೊಂಡು ಅತ್ತಿಗೆಯ ಬಳಿಗೋಡಿದಳು. ಚಾಚಿದ್ದ ತಂದೆಯ ಕೈಗಳು ಹಿಂದಕ್ಕೆ ತೂಗಿಬಿದ್ದುವು.

"ಅಯ್ಯೋ—ಮಗೂ—ನಿಂಗೂ—ನಾನು...." ಮುಂದಕ್ಕೆ ಅವನ ಬಾಯಿಂದ ಮಾತು ಹೊರಡಲಿಲ್ಲ. ಮೆಲ್ಲನೆ ದೇಹವನ್ನೆಳೆದುಕೊಂಡು ಹಿಂದೆ ತನ್ನದಾಗಿದ್ದ ಕೋಣೆಯ ಕಡೆಗೆ ಹೊರಟ. ಬಾಗಿಲ ಬಳಿ ನಿಂತು ಒಂದು ಸಲ ಹಿಂದಕ್ಕೆ ತಲೆ ತಿರುಗಿಸಿ ನೋಡಿದ. ಮಗನೂ ಮಗನ ಹೆಂಡತಿಯೂ ನಿಂತು ತನ್ನನ್ನೇ ನೋಡುತ್ತಿದ್ದರು.

ಅತ್ತಿಗೆಯನ್ನು ತಬ್ಬಿಕೊಂಡು ಅಳುತ್ತ, 'ಬೇಬಿ'ಯು, ತನ್ನ ಮುದ್ದಿನ ಮಗಳು ನಿಂತಿದ್ದಳು. ತನ್ನ 'ಬೇಬಿ,' ಈಗ ತನ್ನನ್ನು ಬಿಟ್ಟು ಹೊರಗಿನವಳ ಸೆರಗು ಸೇರಿದಳು. ಹೃದಯವೇಕೋ ಭಾರವಾಯ್ತು. ಕೋಣೆಯೊಳ ಹೊಕ್ಕು ಖಿನ್ನನಾಗಿ 'ಈಸಿ ಛೇರಿ'ನ ಮೇಲೆ ಕುಳಿತ. ಹೃದಯಾಂತರಾಳದಿಂದ ದುಃಖವನ್ನೆಳೆದುಕೊಂಡು ನಿಟ್ಟುಸಿರು ಹೊರಟಿತು.

"ತೊಲಗಿಹೋಯ್ತುದರೊಡನೆ ನಲುಗಿ ಬಲು ನೊಂದಿದ್ದ ಜೀವದುಸಿರು."



ತುಂಬಿದ ಹುಣ್ಣಿಮೆಯ ಬೆಳುದಿಂಗಳಿನ ಇರುಳು. ಶಾಂತತೆ ಸೌಂದರ್ಯದೊಡನೆ ಬೆರೆತು ಅಪೂರ್ವ ಸುಖಕರ ವಾಗಿತ್ತು. ಸೃಷ್ಟಿಯ ಆ ಚೆಲುವಿಗೆ, ಆ ಶಾಂತತೆಗೆ ಹೊಯಿಕೈಯಾಗಿ ಕಾವೇರಿ ನದಿ ಮೆಲುದನಿಯೊಡನೆ ಹರಿ ಯುತ್ತಿತ್ತು. ಎಲ್ಲವೂ ನಿದ್ದೆಯ ಮಡಿಲಿಗೆ ಸಂದು ಮೌನವಾಗಿತ್ತು.

ತಿರುಮಕೂಡಲಿನ ಬಳಿ ನಾಲ್ಕು ಜೋಡಿನೆತ್ತಿನ ಗಾಡಿ ಗಳು ಒಂದರ ಹಿಂದೆ ಒಂದು ಬರುತ್ತಿದ್ದುವು. ಗಾಡಿ ಹೊಡೆಯುವವರು ತಿಂಗಳಿನ ಸೊಗಸಿಗೆ ಜೋಂಪಿಸುತ್ತಿ ದ್ದರು. ಎತ್ತುಗಳು ಅಭ್ಯಾಸ ಬಲದಿಂದ ದಾರಿ ಹಿಡಿದು ಹೋಗುತ್ತಿದ್ದುವು. ಗಾಡಿಗಳ ಹಿಂದೆ ಸ್ವಲ್ಪ ದೂರದಲ್ಲಿ ಇಬ್ಬರು-ಮೂವರಾಗಿ ಕೆಲವು ಜನ ನಡೆದು ಬರುತ್ತಿದ್ದರು.

ಗಾಡಿಗಳು ಅಮಲ್ದಾರರಿಗೆ ಸೇರಿದವು. ಅವರು, ಮುಂದಿನ ಗಾಡಿಯಲ್ಲಿ ಮಲಗಿ ಅರ್ಧ ನಿದ್ರೆಯಲ್ಲಿದ್ದರು. ಜಮಾಬಂದಿಯ ಗಲಾಟೆ ಆ ಸಾಯಂಕಾಲಕ್ಕೇ ಮುಗಿ ದಿದ್ದರಿಂದ ಅವರ ಮನಸ್ಸು ತಿಳಿಯಾಗಿತ್ತು. ಅಮಲ್ದಾ ರರೂ ನೌಕರರೂ ಕೆರೆಹಳ್ಳಿಯಿಂದ ಮಬ್ಬಿನ ಹೊತ್ತಿಗೆ ಹೊರಟವರು ಸುಮಾರು ರಾತ್ರಿಯ ವೇಳೆಗೆ ತಿರುಮಕೂಡ ಲಿನ ಬಳಿಗೆ ಬಂದಿದ್ದರು. ಯಜಮಾನರು ಗಾಡಿಯಲ್ಲಿ ದ್ದುದರಿಂದ ಕಛೇರಿಯ ನೌಕರರು ಮರ್ಯಾದೆ ಉಚಿತ ವರಿತು ಗಾಡಿಗಳ ಹಿಂದೆ ನಡೆದು ಬರುತ್ತಿದ್ದರು. ಅಮ ಲ್ದಾರರು ಕುಳಿತ ಒಂದು ಗಾಡಿಯನ್ನುಳಿದು ಮೂರು

ಗಾಡಿಗಳೂ ಸಾವಾಸಿನವು.

ಹೊಳೆ ದಾಟುವುದೇನೂ ಕಷ್ಟದ ಕೆಲಸವಲ್ಲ. ಆ ಮಂಡಿಯುದ್ದದ ನೀರಿನಲ್ಲಿ ಕಾಲ್ನಡೆಗಳು ಸುಖವಾಗಿ ಹಾದು ಬರಬಹುದು. ದಾಟಿ ಮುಂದಿನ ದಡವನ್ನು ಸೇರಿದರೆ ನರಸೀಪುರವನ್ನು ಸೇರಿದಂತೆಯೇ. ಆ ದಡದಿಂದ ಊರಿಗೆ ಸುಮಾರು ಒಂದು–ಒಂದೂವರೆ ಫರ್ಲಾಂಗಿನ ದೂರ; ಹೆಚ್ಚೆಂದರೆ ಆಳು ಕೂಗಿನ ಅಳತೆ.

ಗಾಡಿಗಳು ಹೊಳೆಯನ್ನು ಸರಾಗವಾಗಿ ದಾಟಿದುವು. ಹಿಂದೆ ಬರುತ್ತಿದ್ದ ನೌಕರರೂ ಅಲ್ಲೊಬ್ಬ ಇಲ್ಲೊಬ್ಬನಂತೆ ದಾಟುತ್ತಿದ್ದರು. ಗಾಡಿಗಳಿಗೂ ಅವರಿಗೂ ಸುಮಾರು ಅರ್ಧ ಫರ್ಲಾಂಗಿನ ಮೇಲಿದ್ದಿತು. ಜಮಾಬಂದಿ ಗಲಾಟೆಯಿಂದ ಅವರ ತಲೆಗೆ ಹಿಡಿದಿದ್ದ 'ಜಡ್ಡು' ಈ ಬೆಳದಿಂಗಳಿನ ಸೊಗಸಿನಲ್ಲಿ ಮಾಯವಾಗಿತ್ತು. ಹುಡುಗರು ಆಟವಾಡುವಂತೆ ಹೊಳೆಯ ಮಧ್ಯದಲ್ಲಿ ಅಲ್ಲಲ್ಲಿ ನಿಂತು, ನೀರು ಕುಡಿದು, ನಿದಾನವಾಗಿ ಸಾಗಿದ್ದರು.

ವಾಸುವೂ ಆ ಬೆಳುದಿಂಗಳಿಗೆ ಸೋತಿದ್ದನು. ಎಲ್ಲರಿಗಿಂತ ಸ್ವಲ್ಪ ಮುಂದಾಗಿ–ಗಾಡಿಗಳಿಗೆ ಕೊಂಚ ಹಿಂದೆ–ಅವನು ನಡೆದಿದ್ದನು. ಕಛೇರಿಯವರು ಇನ್ನೂ ಕೆಲವರು ಹೊಳೆಯಲ್ಲಿರುವಾಗಲೇ ಅವನು ಈಚೆಯ ದಡವನ್ನು ಸೇರಿದ್ದನು. ಊರಿನ ಕಡೆಯಿಂದ ನಾಯಿ ಬಗುಳುವ ಶಬ್ದ ಕೇಳುತ್ತಿತ್ತು.

ದಡವನ್ನು ಸೇರಿದ ಕೂಡಲೆ, ಅದರ ಪಕ್ಕದಲ್ಲಿ ದೊಡ್ಡ ದೊಡ್ಡ ಮರಗಳು; ಪುರಾತನ ಕಾಲದ ಬಿಳಲು ಬಿಟ್ಟಿದ್ದ ಆಲದ ಮರಗಳು; ದಟ್ಟವಾಗಿ ಬೆಳೆದು ಹಬ್ಬಿ ಕಮಾ

ಸಿನಂತೆ ದಾರಿಯ ಮೇಲೆ ಹರಡಿಕೊಂಡಿದ್ದುವು. ಒಂದು ಕಡೆಯ ರೆಂಬೆಗಳು ಹಾಗೆ ಹಬ್ಬಿ ಹೊಳೆಯ ಅಂಚಿನ ಮೇಲೂ ಬಾಗಿದ್ದುವು.

ಆ ಮರಗಳನ್ನು ಹಾದು ಮುಂದೆ ಹೋಗಬೇಕು. ಗಾಡಿಗಳು ಸ್ವಲ್ಪ ಮುಂದಾಗಿ ಸಾಗಿದ್ದುವು. ವಾಸು ಮರದಡಿಗೆ ಬಂದನು. ಅವನಿಗೆ ಸುಮಾರು ಆರೇಳು ಮಾರು ದೂರದಲ್ಲಿ ಮರದ ಕೆಳಗೆ ಯಾರೋ ಹೆಂಗಸು ನಿಂತಿದ್ದಳು. ಮೇಲೆ ಕೊಂಬೆಗಳು ಹರಡಿಕೊಂಡಿದ್ದರಿಂದ ಅಷ್ಟು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ.

ಇವನು ಮುಖವನ್ನು ಆ ಕಡೆ ತಿರುಗಿಸಿದಾಗ ಯಾರೋ ನಿಂತಿರುವಂತಿರುವುದನ್ನು ಕಂಡು ತಲೆ ಬಗ್ಗಿಸಿ ಕೊಂಡನು. ತಾನು ಬರುವುದನ್ನು ಕಂಡು ಯಾರೋ ಸಂಕೋಚದಿಂದ ಎದ್ದು ನಿಂತಿರಬಹುದೆಂದು ಭಾವಿಸಿ, ಪುನಃ ಅಲ್ಲಿ ನೋಡದೆ ನಾಲ್ಕು ಹೆಜ್ಜೆ ಮುಂದೆ ಹಾಕಿದನು.

ಒಂದು ಕ್ಷಣದಲ್ಲಿ ಮರದೆಲೆಗಳು ಅಳ್ಳಾಡಿದಂತಾಯಿತು. ........ನಕ್ಕಂತಾಯಿತು........ಏನೋ ಧೊಪ್ಪನೆ ನೀರಿನಲ್ಲಿ ಬಿದ್ದ ಹಾಗಾಯಿತು. ವಾಸು ಸರ್‍ರನೆ ತಿರುಗಿ ನೋಡಿ ದನು. ಮರದ ಕೆಳಗೆ ನಿಂತಿದ್ದ ಹೆಂಗಸು ಅಲ್ಲೆಲ್ಲೂ ಕಾಣಿಸಲಿಲ್ಲ. ನೀರಿನ ಮೇಲೆ ಬಾಗಿಕೊಂಡಿದ್ದ ಕೊಂಬೆ ಗಳು ಅಳ್ಳಾಡುತ್ತಿದ್ದುವು. ಅವನ ಮೈ ಝಲ್ಲೆಂದು ಬೆವತುಹೋಯಿತು.

* * * *

ವೆಂಕಟರಮಣಯ್ಯನವರು ನರಸೀಪುರದಲ್ಲಿ ಗಣ್ಯರಾದ ಬ್ರಾಹ್ಮಣರು. ಅವರ ಸದಾಚಾರನಿಷ್ಠೆಯೂ ಸರಳಜೀವ

ನವೂ ಊರಿನಲ್ಲಿ ಅವರಿಗೆ ಮರ್ಯಾದೆಯನ್ನು ತಂದಿದ್ದುವು. ಮುಕ್ಕಾಲುಪಾಲು ಜನ ಅವರಿಗೆ ಬೇಕಾದವರಾಗಿ, ಸಮಯದಲ್ಲಿ ಆಗುತ್ತಿದ್ದರು.

ಅವರಿಗಿದ್ದವನು ಒಬ್ಬನೇ ಮಗ—ವಾಸು. ಅವನಲ್ಲದೆ ವೆಂಕಟರಮಣಯ್ಯನವರ ಹೊಟ್ಟೆಯಲ್ಲಿ ಹೆಣ್ಣೂ ಇಲ್ಲ; ಗಂಡೂ ಇಲ್ಲ. ತಮಗಿರುವ ಜೀವವೆಲ್ಲ ವಾಸು ಒಬ್ಬನಲ್ಲೇ ಎಂದು ಆ ಗಂಡ ಹೆಂಡರು ತಿಳಿದಿದ್ದರು; ಅತಿಶಯ ಮಮತೆಯಿಂದ, ಆದರದಿಂದ ಮಗನನ್ನು ಸಾಕಿದ್ದರು. ಈಚೆಗೆ ತಮಗೆ ಪಿಂಚನ್ ಆದ ಮೇಲೆ ಅಮಲ್ದಾರರಿಗೆ ಹೇಳಿಕೊಂಡು ಕಛೇರಿಯಲ್ಲಿ ಒಂದು ಗುಮಾಸ್ತೆ ಕೆಲಸಕ್ಕೆ ಮಗನನ್ನು ಸೇರಿಸಿದ್ದರು. ಹೋದ ವರುಷ ಮೈಸೂರಿನ ಯೋಗ್ಯ ಸಂಸಾರದವರೊಬ್ಬರ ಕಡೆಯಿಂದ ಹೆಣ್ಣು ತಂದು ಮಗನಿಗೆ ವಿಜೃಂಭಣೆಯಿಂದ ಮದುವೆಯನ್ನೂ ಮಾಡಿದ್ದರು. ಸೊಸೆ ಇನ್ನೂ ಮನೆಗೆ ಬಂದಿರಲಿಲ್ಲ.

ಈಗ ಒಂದೆರಡು ದಿನಗಳಿಂದ ವೆಂಕಟರಮಣಯ್ಯನವರ ಮನಸ್ಸು ಸ್ವಸ್ಥವಾಗಿರಲಿಲ್ಲ. ವಾಸುವಿನ ಮೇಲೆ ಅವರ ದೃಷ್ಟಿ ಬಿದ್ದಿತ್ತು. 'ಹುಡುಗ ಏಕೋ ಕಂಗೆಟ್ಟಿದ್ದಾನೆ' ಎಂದು ಔಷಧಿ ತರಿಸಿ, ದೇಹಸ್ಥಿತಿಯನ್ನು ವಿಚಾರಿಸಿದರು. ವಾಸು ಏನನ್ನೂ ಹೇಳದಾದನು. ಜ್ವರವಿಲ್ಲ; ಚಳಿಯಿಲ್ಲ; ನೆಗಡಿಯಿಲ್ಲ; ದಿನದಿನಕ್ಕೆ ಹುಡುಗ ಹಲ್ಲಿಯ ಹಾಗೆ ಸವೆಯುತ್ತಿದ್ದಾನೆ. ಕಾರಣವರಿಯದೆ ವೆಂಕಟರಮಣಯ್ಯನವರು ಚಿಂತೆಗೊಳಗಾದರು. ಇವೆಲ್ಲದರ ಜೊತೆಗೆ ಅವರ ಯೋಚನೆ ಹೆಚ್ಚಾಗುವ ಒಂದು ವಿಶೇಷ

ಸಂಗತಿ ಅನುಭವಕ್ಕೆ ಬಂದಿತು.

ಒಂದು ದಿನ ಬೆಳಗ್ಗೆ ಯಾವುದೋ ಮನೆಗೆಲಸ
ಸಾಮಾನು ಬೇಕಾಗಿ ಅದು ವಾಸು ಕೊಠಡಿಯಲ್ಲಿರಬಹ
ದೆಂಬ ನಿರೀಕ್ಷೆಯಿಂದ ಅಲ್ಲಿಗೆ ಹೋದರು. ಏಳೆಂಟು ದಿ
ಗಳಿಂದ ಅವನ ಕೊಠಡಿಗೆ ಹೋಗಿರಲಿಲ್ಲ. ಒಳ
ಕಾಲಿಟ್ಟ ಕೂಡಲೆ ಅವರ ಮನಸ್ಸು ಏನೋ ಒಂದು ಬ
ಯಾಯಿತು. ಸುತ್ತ ನೋಡಿ ಭ್ರಾಂತರಾದರು
ಗೋಡೆಯ ಮೇಲೆಲ್ಲ ಗಂಧದಲ್ಲಿ ಬಡಿದ ಕೈ ಗುರುತುಗಳು
ನೆಲದ ಮೇಲೆ ಸೀಳಿದ ವೀಳೆಯದೆಲೆಯ ತುಂಡುಗಳು
ಕೊಠಡಿಯಲ್ಲೆಲ್ಲ ಅತಿಯಾದ ಸುವಾಸನೆ. ವೆಂಕಟರ
ಣಯ್ಯನವರಿಗೆ ಅರ್ಥವಾಗಲಿಲ್ಲ. ಒಂದು ಕ್ಷಣ ಶೂನ
ಮನಸ್ಸಿನಲ್ಲಿ ನಿಂತು ನೋಡಿದರು. ಥಟ್ಟನೆ ಏನೋ
ಹೊಳೆದಂತಾಯಿತು. ಬಾಗಿಲೆಳೆದುಕೊಂಡು ಈ ಚೆ
ಬಂದುಬಿಟ್ಟರು.

ಆ ಸಂಜೆ ವಾಸು ಕಛೇರಿಯಿಂದ ಮನೆಗೆ ಬಂದಾ
ವೆಂಕಟರಮಣಯ್ಯನವರು ಅವನನ್ನು ಎಂದಿನಂತೆ ಮಾತ
ಡಿಸಲಿಲ್ಲ. ದೇಹಸ್ಥಿತಿ ಹೇಗಿರುವುದೆಂದು ಕೂಡ ಕೇ
ಲಿಲ್ಲ. ರಾತ್ರಿ ಊಟವಾದ ಮೇಲೆ- ವಾಸು ತನ್ನ ಕೊಠಡಿ
ಮಲಗಿಕೊಳ್ಳುವುದಕ್ಕೆ ಹೋದಮೇಲೆ—ವೆಂಕಟರ
ಣಯ್ಯನವರು ಮಗನ ಕೊಠಡಿಗೆ ಅಡ್ಡವಾಗಿ ಹಾಸಿಕೊ
ಡರು. ಸದ್ದಾಗದಂತೆ ಬಾಗಿಲಿಗೆ ಹೊರಗಡೆಯಿಂ
ಒಂದು ಬೀಗವನ್ನು ಹಾಕಿಬಿಟ್ಟರು.

ಬೆಳಗ್ಗೆ ಎಲ್ಲರಿಗೆ ಮುಂಚೆಯೇ ಎದ್ದು ಬೀಗ ತೆಗೆ
ಬಿಟ್ಟರು. ವಾಸು ಹೊರಗೆ ಬಂದ ಮೇಲೆ ಅವನಿಗೆ ಕಾ

ದಂತೆ ಕೊಠಡಿಗೆ ಹೋದರು. ನೋಡಿ ಅಪ್ರತಿಭರಾದರು. ನಿನ್ನೆಯ ದಿವಸದಂತೆಯೇ, ಗೋಡೆಯ ಮೇಲೆ ಅಲ್ಲಲ್ಲಿ ಗಂಧದ ಹೊಸ ಚಟ್ಟು ಬಡಿದಿವೆ; ವೀಳೆಯದೆಲೆಯ ಸೀಳು ಗಳು ಮಗನ ಹಾಸುಗೆಯ ಬಳಿ ಬಿದ್ದಿವೆ; ಪುನುಗಿನ ಅತಿ ಸುವಾಸನೆ ಸುತ್ತಿಕೊಂಡಿದೆ.

*   *   *   *

ದೇವೀ ನರಸಯ್ಯ ನರಸೀಪುರದಲ್ಲಿಯೇ ಹುಟ್ಟಿ ಬೆಳೆ ದವನು; ಹೆಸರಾದ ಮಾಂತ್ರಿಕ. ಬಲಿ, ಮಾಟ, ಮಾರಣ ಮೊದಲಾದವುಗಳಲ್ಲಿ ಎತ್ತಿದ ಕೈ. ಅವನ ಕೀರ್ತಿ ಸುತ್ತ ಹಳ್ಳಿಗಳ ಮೇಲೆಲ್ಲ ಪಸರಿಸಿತ್ತು. ಹಳ್ಳಿಯವರಿಗೆ ಅವ ನನ್ನು ಕಂಡರೆ ಒಂದು ವಿಧವಾದ ಭಯಮಿಶ್ರ ಭಕ್ತಿಯೂ ಸ್ಥಳದವರಿಗೆ ಗೌರವವೂ ಇದ್ದುವು.

ನರಸಯ್ಯ ಮಾಡದ ಕೆಲಸವಿರಲಿಲ್ಲ; ಅವನಿಗೆ ಸಿದ್ಧಿ ಸದ ಕ್ರಿಯೆಯಿರಲಿಲ್ಲ. ಊರಿನವರು ಸಾಮಾನ್ಯವಾಗಿ ಅವನನ್ನು ಬೆಳಗ್ಗಿನ ಹೊತ್ತು ಕಾಣುತ್ತಿರಲಿಲ್ಲ. ವೆಂಕಟ ರಮಣಯ್ಯನವರೂ ಅವನನ್ನು ನೋಡಿದ್ದರು. ಅವನ ಶಕ್ತಿ ಸಾಮರ್ಥ್ಯಗಳ ವಿಚಾರವಾಗಿ ಅವರಿವರಿಂದ ಬೇಕಾ ದಷ್ಟು ಕೇಳಿದ್ದರು.

ಒಂದು ಮಧ್ಯಾಹ್ನ ಅವನನ್ನು ಕಂಡು ವೆಂಕಟರಮಣ ಯ್ಯನವರು ಮಾತನಾಡಿದರು—

'ಹಾಗಾದರೆ ನನ್ನ ಸಂಶಯ ನಿಜವೆ?'

'ನಿಶ್ಚಯ, ಸ್ವಾಮಿ.'

'ನೋಡದೆ ಹೇಗೆ ಹೇಳುತ್ತಿ?'

'ಹೇಳಬಹುದು.'

'ಇಲ್ಲಾ, ಹುಡುಗನಲ್ಲಿ ಇನ್ನೇನಾದರೂ ದುರ್ಗುಣ...?

'ಅಂತಹುದೇನೂ ಇಲ್ಲ, ಸ್ವಾಮಿ—ನಾನು ಹೇಳುತ್ತೀನಿ ಇದು ಆದರ ಚೇಷ್ಟೆಯೇ.'

ವಾಸುವಿಗೆ ಮೋಹಿನಿ ಹಿಡಿದಿದೆ ಎಂದು ನರಸಯ್ಯ ಅಭಿಪ್ರಾಯಪಟ್ಟಾಗ ವೆಂಕಟರಮಣಯ್ಯನವರ ಎದೆ ಗುಂಡಿ ನೇಟಿಗೆ ಎದುರುಬಿದ್ದಂತಾಯಿತು. ಜಾತಿಯಲ್ಲಿ ಕಡಿಮೆಯವನಾದ ನರಸಯ್ಯನ ಕಾಲು ಹಿಡಿದುಕೊಳ್ಳುವುದಕ್ಕೆ ಹೋದರು. ನರಸಯ್ಯ ವೆಂಕಟರಮಣಯ್ಯನವರಿಗೆ ಸಮಾಧಾನ ಧೈರ್ಯಗಳನ್ನು ಹೇಳಿ ತಾನು ಆ ಸಂಜೆಯೇ ಮನೆಗೆ ಬಂದು ವಾಸುವನ್ನು ನೋಡಿ ಮುಂದಿನ ಏರ್ಪಾಡು ಮಾಡುತ್ತೇನೆಂದು ಮಾತುಕೊಟ್ಟು, ವೆಂಕಟರಮಣಯ್ಯನವರನ್ನು ಕಳುಹಿಸಿದನು.

ಸಾಯಂಕಾಲ ವಾಸು ಮನೆಗೆ ಬಂದಾಗ ತಾಯಿತಂದೆಗಳಿಗೆ ಅವನನ್ನು ನೋಡಿ ಎದೆನೊಂದುಹೋಯಿತು. ಕೈಗೆ ಬಂದ ಹುಡುಗ; ಹೆಂಡತಿ ಮನೆಗೆ ಬರುವ ಕಾಲದಲ್ಲಿ ಈ ಗತಿಯೇ? ಹದಿನೈದು ದಿವಸಗಳಿಂದ ಎಷ್ಟು ಹೀರಿಹೋಗಿದಾನೆ? ಹಲ್ಲಿಯಾದರೂ ವಾಸಿ; ಮುದುಕ ಗಂಡ—ಹೆಂಡಿರು ಮಗನಿಗೆ ಕಾಣದಂತೆ ಕಂಬನಿಯನ್ನು ಚಿಮ್ಮಿದರು.

ಮಬ್ಬಿನ ಹೊತ್ತಿಗೆ ದೇವೀ ನರಸಯ್ಯ ವೆಂಕಟರಮಣಯ್ಯನವರ ಮನೆಗೆ ಬಂದ. ಬಂದವನು ವಾಸುವನ್ನು ಕಂಡು ಅವನ ಕೊಠಡಿಗೆ ಹೋದ. ಒಳಗೆ ಬಾಗಿಲು ಮುಚ್ಚಿತು. ಅರ್ಧ ಗಂಟೆಯ ಮೇಲೆ ಬಾಗಿಲು ತೆಗೆಯಿತು. ಏನೋ ಬಹಳ ಮಾತಾಡಿರಬೇಕು ಇಬ್ಬರೂ.

ವೆಂಕಟರಮಣಯ್ಯನವರಿಗೆ ಅದನ್ನು ಕೇಳುವ ಕುತೂಹಲ. ನರಸಯ್ಯ ಇದನ್ನು ಅವರ ಮುಖದಲ್ಲೇ ತಿಳಿದುಕೊಂಡು—'ಸ್ವಾಮಿ ನೀವೇನೂ ಯೋಚನೆ ಮಾಡಬೇಕಾಗಿಲ್ಲ; ವಾಸಪ್ಪನವರಿಗೆ ಕೆಲವು ಗುಪ್ತ ವಿಚಾರಗಳನ್ನು ಹೇಳಿಕೊಟ್ಟಿದ್ದೇನೆ. ಅದಕ್ಕೆ ಮಾಡಬೇಕಾದ 'ಹಿಕ್ಮತ್ತು' ಮಾಡಿದೇನೆ. ನಾನು ನಾಳೆ ಇದೇ ಹೊತ್ತಿಗೆ ಬರುತ್ತೇನೆ' ಎಂದು ಹೇಳಿ ಹೊರಟುಹೋದ.

* * * *

ಅರ್ಧ ರಾತ್ರಿಯ ಸುಮಾರು; ಕಲ್ಲು—ನೀರು ಒಂದಾಗುವ ವೇಳೆ. ವಾಸುವೊಬ್ಬನೇ ತನ್ನ ಕೊಠಡಿಯಲ್ಲಿ ಮಲಗಿದಾನೆ. ಹೊರಗಡೆಯಿಂದ ಬಾಗಿಲಿಗೆ ಬೀಗ ಹಾಕಿಕೊಂಡು ವೆಂಕಟರಮಣಯ್ಯನವರು ಬಾಗಿಲ ಹತ್ತಿರವೇ ಮಲಗಿದಾರೆ.

ವಾಸು ಒಂದು ಬಗೆಯ ಅರ್ಧ ನಿದ್ರೆ ಅರ್ಧ ಎಚ್ಚರಗಳ ಸ್ಥಿತಿಯಲ್ಲಿದ್ದಾನೆ. ಆಗ ಕೊಠಡಿಯೊಳಗೆ ಯಾರೋ ಸುಳಿದ ಹಾಗಾಯಿತು; ಕಾಲುಸರದ ಸದ್ದಾಯಿತು; ಗಂಧದ ವಾಸನೆ ಹರಡಿ ವಾಸುವನ್ನು ಸೋಕಿತು. ಆ ಬರವಿನ, ಸದ್ದಿನ, ಸುವಾಸನೆಯ ಪರಿಚಯ ತನಗೆ ಇರುವಂತೆ ಅವನ ಭಾವನೆ. ಅವನ ಮುಖದ ಮೇಲೆ ತಿಳಿನಗುವಿನ ಒಂದು ಅಲೆ ಸುಳಿಯಿತು.

ಒಳಗೆ ಬಂದವಳು ಹುಡುಗಿ. ಹದಿನೇಳರ ಪ್ರಾಯವಿರಬಹುದು. ಮಲ್ಲಿಗೆಯ ಹೂವಿನಂಥ ಬಿಳಿಯ ಪತ್ತಲ; ಸುರುಳಿ ಸುರುಳಿಯಾಗಿ ನಿತಂಬಗಳ ಮೇಲೆ ನಲಿಯುತ್ತಿದ್ದ ಕಪ್ಪು ಕೂದಲಿನ ರಾಶಿ; ವಿಶಾಲವಾದ ಹಣೆ; ತೇಜೋ

ಯುಕ್ತವಾಗಿ ಸ್ವಲ್ಪ ನೀಲವಾಗಿದ್ದ ಕಣ್ಣುಗಳು; ನಯವಾದ ಮಾಟವಾದ ಮೂಗು; ಅದರ ಮೇಲೆ ಕಣ್ಣು ಕೋರಯಿಸುವ ಒಂದು ವಜ್ರದ ಮೂಗುತಿ; ಕಿವಿಯಲ್ಲಿ ಅಂಥವೇ ಎರಡು ಓಲೆಗಳು; ಅರಳಿದ ರೋಜಾಹೂವಿನಂಥ ಕೆನ್ನೆಗಳು; ರಾಗರಂಜಿತವಾದ ಮೃದುವಾದ ತುಟಿಗಳು; ಬಳೆಗಳಿಂದ ತುಂಬಿದ ಸ್ವಲ್ಪ ಉನ್ನತವಾಗಿ ಹಿಡಿದಿದ್ದ ಕೈಯಲ್ಲಿ ನಿಗಿನಿಗಿಸುವ ಬೆಳ್ಳಿಯ ತಟ್ಟೆ; ಅದರಲ್ಲಿ ಅಣಿಮಾಡಿಟ್ಟ ವೀಳ್ಯಸಾಮಗ್ರಿ; ಗಂಧದ ಬಟ್ಟಲು........ ಅಸಾಧಾರಣ ಲಾವಣ್ಯವತಿ.

ಬಂದವಳು ಒಂದು ಕ್ಷಣಕಾಲ ವಾಸುವನ್ನು ದಿಟ್ಟಿಸಿ ನೋಡಿದಳು. ನೋಡಿ ಸ್ವಲ್ಪ ಮಾತ್ರ ನಕ್ಕು ಎರಡು ಹೆಜ್ಜೆ ಮುಂದಿಟ್ಟಳು. 'ಅವಳು' ತನ್ನ ಹಾಸುಗೆಯ ಮೇಲೆ ಬಂದು ಕುಳಿತಂತೆ ವಾಸುವಿಗೆ ಬೋಧೆಯಾಯಿತು. ಯಂತ್ರದಂತೆ ಸರ್‍ರನೆ ಪಕ್ಕಕ್ಕೆ ಹೊರಳಿದನು. ಆಗ ಅವನ ಕೈ ಅನಪೇಕ್ಷಿತವಾಗಿ ಅವಳ ಬೆನ್ನಿಗೆ ಸೋಕಿತು. 'ಅವಳು' ಪೂರ್ಣವಾಗಿ ಇವನ ಕಡೆ ತಿರುಗಿ ಬಾಗಿ ಇವನ ಕೈಯನ್ನು ತೆಗೆದು ತನ್ನ ಕೆನ್ನೆಯಮೇಲಿಟ್ಟುಕೊಂಡಳು. ವಾಸು ಹಾಗೆಯೇ ಅವಳ ಮುಖವನ್ನು ಎರಡು ಕೈಗಳಿಂದಲೂ ಹಿಡಿದು ತನ್ನೆಡೆಗೆ ಎಳೆದುಕೊಂಡನು. ಆಗ ಇವನ ನಿದ್ದೆಯ ಭಾವ ಸರ್‍ರನೆ ಇಳಿದುಹೋಯಿತು. ಮನಸ್ಸಿನ ಮೇಲೆ ಯಾವುದೋ ನೆನಪು ಒತ್ತಿತು. ಕೈ ಎಳೆದುಕೊಂಡು ಥಟ್ಟನೆ ಹಾಸುಗೆಯ ಮೇಲೆ ಎದ್ದು ಕುಳಿತನು.

'ಅವಳು' ಮೆಲ್ಲನೆ ಅಪೂರ್ವವಾದ, ಅಲೌಕಿಕವಾದ,

ಸಣ್ಣ ದನಿಯಲ್ಲಿ–' ಯಾಕೆ ? ' ಎಂದಂತಾಯಿತು ; ವಾಸು ಮನಸ್ಸಿನಲ್ಲಿದ್ದುದನ್ನು ಪ್ರಯತ್ನಿಸಿ ಉಜ್ವಲಗೊಳಿಸುತ್ತ–

'ದಿನಾಗಲೂ ಏನು ನಡೆಯುವುದು ಗೊತ್ತೆ? ಎಂದನು.'

' ಏನು ? '

' ನೀನು ಬಂದು ಹೋದ ಮೇಲೆ........'

' ಹೂ.'

' ಇನ್ನೊಬ್ಬಳು ಹುಡುಗಿ........'

' ಹೂ ? '

' ನಿನ್ನ ಹಾಗೇ........'

' ಹೂ ! '

' ಬರುತ್ತಾಳೆ.'

' ಆಂ ? '

'...........'

' ಎಷ್ಟು ಹೊತ್ತಿನಲ್ಲಿ ? '

' ಇದೇ ಹೊತ್ತಿನಲ್ಲಿ.'

' ಬಂದು........? '

' ನಿನ್ನ ಹಾಗೇ........'

' ಅವಳು ' ಮಾತನಾಡಲಿಲ್ಲ: ಒಂದು ಅದ್ಭುತಭಾವ ಅವಳ ಮುಖದ ಮೇಲೆ ಮೈದೋರಿ ಮಾಯವಾಯಿತು. ಥಟ್ಟನೆ ಮರ್ಮಭೇದಕವಾದ ಒಂದು ವಿಲಕ್ಷಣ ನಗು ಅವಳ ಮುಖದಲ್ಲಿ ತೋರಿತು. ಕೈ ಬಳೆಗಳನ್ನು ಸಿಂಜಿಸುತ್ತ–

' ನಿಶ್ಚಯವಾಗಿ ಹೇಳುತ್ತೀಯಾ ? '

' ಸತ್ಯವಾಗಿ........'

'ನಾನು ನಂಬುವುದಿಲ್ಲ.'

'ಹಾಗೆಂದರೆ........?'

'ಇಲ್ಲ—ನಿನ್ನ ಮಾತು ಸುಳ್ಳು!'

'ಸುಳ್ಳು?'

'ಹೌದು; ಸುಳ್ಳು!'

'ಹೇಗೆ ಹೇಳುತ್ತಿ?'

'ನನಗೆ ಗೊತ್ತು!'

'...........'

'ಇದು ನಿನ್ನ........ನಿನಗೆ ಸೇರಿದ ಯಾರೋ ಒಬ್ಬರ ಯುಕ್ತಿ, ಕಲ್ಪನೆ! ನನ್ನನ್ನು ಮೋಸಮಾಡುವುದಕ್ಕೆ! ನಾ ಬಲ್ಲೆ. ನನ್ನನ್ನು ಬಿಟ್ಟು ಇಲ್ಲಿಗೆ ನಿನ್ನ ಹತ್ತಿರ ಬರಲು ಇನ್ನಾರಿಗೆ ಎದೆ?'

ಅವಳ ಮಾತಿನಲ್ಲಿ ತೀಕ್ಷ್ಣತೆಯಿತ್ತು; ಅಧಿಕಾರವಿತ್ತು; ನಿಶ್ಚಲತೆಯಿತ್ತು. ವಾಸು ನಡುಗಿದ. ಪುನಃ ನುಡಿದಳು 'ಅವಳು'—

'ನೀನು ಹೇಳುತ್ತಿರುವುದು ಸುಳ್ಳೆಂದು ಬಲ್ಲೆ; ಆದರೆ ನಿನಗೋಸ್ಕರ ಒಂದು ಕೆಲಸವನ್ನು ಮಾಡುತ್ತೇನೆ........ ಏಳು!'

'ಎಲ್ಲಿಗೆ?'

'ನನ್ನೊಡನೆ ಬಾ.'

'ಹೊರಗೆ?....ಬಾಗಿಲು?'

'ನನ್ನ ಕೈ ಹಿಡಿದುಕೊ.'

'ನಾಲ್ಕು ಬಾಗಿಲುಗಳಿವೆ.'

'ಭಯವಿಲ್ಲ.'

ವಾಸು ಯಂತ್ರದಂತೆ ಎದ್ದು ನಿಂತು 'ಅವಳು'

ಕೊಟ್ಟ, ಕೈಯನ್ನು ಹಿಡಿದುಕೊಂಡನು. ಸ್ಪರ್ಶದಿಂದ ಅವನ ಮೈ ಪುಲಕಿತವಾಗಿ ಮನಸ್ಸು ಒಂದು ಅನಿರ್ವಚನೀಯ ಭಾವವಶವಾಯಿತು, ಅಂತರಿಕ್ಷದಲ್ಲಿ ಹಾರಿದಂತಾಯಿತು; ಮರುಗಳಿಗೆಯೇ ಸುಯ್ಯೆಂದು ತಣ್ಣನೆಯ ಗಾಳಿ ಮೈಮೇಲೆ ಬೀಸಿತು....ಮರದ ಮರ್ಮರ ಶಬ್ದವಾಯಿತು ....ಪಕ್ಕದಲ್ಲಿ ನೋಡಿದರೆ ಹೊಳೆ; ಯಾವುದೋ ಗೊತ್ತಿಲ್ಲದ ಪ್ರದೇಶ; ವಾಸು ಮೈ ಬೆವತು ನೀರಾಗಿತ್ತು. ಆ ಕಾಡಿನಲ್ಲಿ ನಿಂತು, ಅವಾಕ್ಕಾಗಿ ಸುತ್ತ ನೋಡಿದನು.

'ಅವಳು' ಹಿಂದಣಿಂದ ನುಡಿದಂತಾಯಿತು.

'ಅದನ್ನು ಕೀಳು;'

ವಾಸು ನೋಡಿದನು. ಮುಂದೆ ನೆಲದಮೇಲೆ ಹಬ್ಬಿಕೊಂಡಿದ್ದ ಎಂತಹುದೋ ಬಳ್ಳಿ........ಬಗ್ಗಿ ಪ್ರಯತ್ನಪೂರ್ವಕವಾಗಿ ಕಿತ್ತಿದನು. ಪುನಃ ಅವಳ ಧ್ವನಿ—

'ಅದನ್ನು ಭದ್ರವಾಗಿ ಹಿಡಿದುಕೋ!'

ಅವಳ ಮಾತಿನಲ್ಲಿ ಒಂದು ಬಗೆಯ ಖೇದಸೂಚಕ ಸ್ವರವಿತ್ತು. ವಾಸು ಅವಳ ಆಜ್ಞೆಯಂತೆ ಆ ಬಳ್ಳಿಯನ್ನು ಕೈಲಿ ಹಿಡಿದುಕೊಂಡ. ಮರಳಿ ಹಿಂದಣಿಂದ ನುಡಿದಳು 'ಅವಳು'—

'ಇದು ನಿನ್ನ ಹತ್ತಿರ ಇದ್ದರೆ ನಾನು........ಅಥವಾ ನನ್ನಂಥವರು........ನಿನ್ನನ್ನು ಸಮೀಪಿಸುವುದಕ್ಕಾಗುವುದಿಲ್ಲ. ಇದರ ಶಕ್ತಿ ಅಂಥದು; ಸುಡುಗಾಡು ಬೇರಿನದು. ಆ 'ಇನ್ನೊಬ್ಬಳು' ನನ್ನ ಹಾಗೇ ಬರುತ್ತಾಳೆ ಎಂದೆಯಲ್ಲ. ಅವಳು ಬಂದಾಗ ಮಾತ್ರ ಮೈಮೇಲೆ ಇಟ್ಟುಕೋ. ಅವಳಿಗೆ ನಿನ್ನ ಬಳಿ ಬರುವುದಕ್ಕಾಗುವುದಿಲ್ಲ. ಇನ್ನು

ಹೊರಡು.'

ಗಾಳಿ ಸುಯ್ಯೆಂದಂತಾಯಿತು. ಏನೋ ಆಯಿತು. ವಾಸು ನೋಡಿದ. ಆ ಮರ.....ಕಾಡು......ಹೊಳೆ...... ಪ್ರದೇಶ ಒಂದೂ ಕಾಣಿಸಲಿಲ್ಲ. ತನ್ನ ಮನೆಯ ಮುಂದೆಯೇ ನಿಂತಿದ್ದಾನೆ; ಮೈಮೇಲೆ ಬಟ್ಟೆಯಿಲ್ಲದೆ ನಗ್ನನಾಗಿದ್ದಾನೆ.

'ಅಮ್ಮಾ!' ಎಂದು ಒಂದು ಸಲ ಚೀರಿ ಬಿದ್ದುಬಿಟ್ಟ.

ಸ್ವಲ್ಪ ಹೊತ್ತಿನಲ್ಲಿಯೇ ವೆಂಕಟರಮಣಯ್ಯನವರು ಬಾಗಿಲು ತೆಗೆದು ಓಡಿ ಬಂದರು. ಹಾಲು ಚೆಲ್ಲಿದ ಹಾಗೆ ಬೆಳುದಿಂಗಳು........ಬೀದಿಯಲ್ಲಿ ನರಪ್ರಾಣಿಯಿಲ್ಲ........ ಮನೆಯ ಮುಂದೆ ಮಗ ನಿರ್ವಾಣವಾಗಿ ಬಿದ್ದಿದಾನೆ. 'ಮಗೂ!' ಎನ್ನುತ್ತ ಅವನ ಕಡೆ ಧಾವಿಸಿದರು. ಪಕ್ಕದ ಜಗುಲಿಯ ಮೇಲೆ ಏನೋ ಸದ್ದಾಯಿತು. ತಿರುಗಿ ನೋಡಿದರು. ಬಿಳಿಯ ಸೀರೆಯನ್ನುಟ್ಟಿದ್ದ ಒಬ್ಬಳು ಹುಡುಗಿ ಜಗುಲಿಯಿಂದ ಧುಮುಕಿ ಓಡಿದಂತಾಯಿತು. ವೆಂಕಟರಮಣಯ್ಯನವರು ಗಡಗಡನೆ ನಡುಗಿದರು.

* * * *

ಮಾರನೆಯ ಸಂಜೆ ತಾನು ಬರುವುದಾಗಿ ಹೇಳಿದ್ದ ಹೊತ್ತಿಗೆ ದೇವೀ ನರಸಯ್ಯ ಬಂದ. ಬಂದವನು ಹಿಂದಿನ ದಿನದಂತೆ ವಾಸುವಿನ ಕೂಡ ಬಹಳ ಹೊತ್ತು ಮಾತಾಡಿದ. ಮನೆಯವರಿಗೆಲ್ಲ ಧೈರ್ಯ ಹೇಳಿ ತಾನು ಹೋಗುವಾಗ ತಂತಿಯಲ್ಲಿ ಬಿಗಿದ ಯಂತ್ರವನ್ನು ವಾಸುವಿನ ಕೊರಳಿಗೆ ಕಟ್ಟಿ ಹೊರಟುಹೋದ.

* * * *

ಅದೇ ರಾತ್ರಿ. ಒಂದು ಗಂಟೆಯ ಮೇಲಾಗಿತ್ತು. ವಾಸು ಹಾಗೆಯೇ ಮಲಗಿ ನಿದ್ದೆಯಲ್ಲಿದ್ದಾನೆ. ಕೊಠಡಿಯ ಬಾಗಿಲು ಹೊರಗಡೆಯಿಂದ ಬೀಗ ಹಾಕಿರುವುದು ಹಾಕಿದಂತೆಯೇ ಇದೆ. ಥಟ್ಟನೆ ನರುಗುಂಪು ಸೂಸಿ 'ಅವಳು' ಒಳಗೆ ಸುಳಿದು ಬಂದಳು. ನಗುಮೊಗ; ಬಳುಕುತ್ತಿದ್ದ ಮೈ; ಕೈಯಲ್ಲಿ ತಟ್ಟೆ. ಬಂದವಳು ಹಿಂದಿನ ದಿವಸಗಳಂತೆ ಹಾಸುಗೆಯ ಮೇಲೆ ಹೋಗಿ ಕುಳಿತುಕೊಳ್ಳಲಿಲ್ಲ. ಎರಡು ಮಾರು ದೂರದಲ್ಲಿ ನಿಂತು ಬಳುಕುತ್ತ ನಲಿಯುತ್ತ ಅಪೂರ್ವ ಮನೋಹರವಾಗಿ ನಕ್ಕಳು, ವಾಸು ಆಗಲೇ ಎಚ್ಚರಗೊಂಡಿದ್ದನು. ಆ ನಗು, ಆ ನಿಲುವು, ಆ ಬೆಡಗು ಅವನಿಗೆ ಅತ್ಯಂತ ಮಧುರವಾಗಿ ತೋರಿಮವು. 'ಅವಳು' ತನ್ನ ಅದೇ ಮೋಹಕವಾದ, ಅಲೌಕಿಕವಾದ, ಲಘುವಾದ ದನಿಯಲ್ಲಿ ನುಡಿದಳು—

'ಕೊರಳಿನಲ್ಲಿರುವುದನ್ನು ತೆಗೆಯಬಾರದೆ?'

ದನಿಯಲ್ಲಿ ಪ್ರಾರ್ಥನೆಯ, ಪ್ರೇಮದ, ದೀನತೆಯ ಭಾವವಿತ್ತು. ವಾಸು ಕೈಗಳು ಮೆಲ್ಲನೆ ತನ್ನ ಕೊರಳಿನಲ್ಲಿದ್ದ 'ಯಂತ್ರ'ದ ಕಡೆಗೆ ಹೋದುವು. ಮನಸ್ಸಿನಲ್ಲಿ ಏನೋ ಯೋಚನೆ, ಏನೋ ಜ್ಞಾಪಕ; ಆ ಯೋಚನೆ, ಜ್ಞಾಪಕಗಳನ್ನು ಕೊಲ್ಲುತ್ತಿದ್ದ ಇವಳ ಸಾನ್ನಿಧ್ಯ; ಸಾಮೀಪ್ಯ. ಪ್ರಯತ್ನಿಸಿ ಪ್ರಯತ್ನಿಸಿ ಕೈಯನ್ನು ಹಿಂದೆ ತೆಗೆದುಬಿಟ್ಟನು. ಮೆಲ್ಲನೆ ಕೇಳಿದಳು—

'ಯಾಕೆ?'

'ಏನು?'

'ತೆಗೆಯಬಾರದೆ?'

‘ ಇ....ಲ್ಲ....’

‘ ಇಲ್ಲ ? ’

‘ ಉ....ಹು....ಂ....’

‘ ಒಂದು ಕ್ಷಣ ಮೌನ: ಪುನಃ ಅವಳ ದನಿ—

‘ ಸ್ವಲ್ಪ ತೆಗೆಯಬಾರದೆ ? ’

ಆ ದನಿ, ಆ ದೀನತೆ, ಆ ಭಾವ ಅವನನ್ನು ಹಿಂಡುತ್ತಿದ್ದುವು.

‘ ಸ್ವಲ್ಪ....ಒಂದೇ ಕ್ಷಣ....’

ಅವಳ ಕಣ್ಣು ನೀರಿನಲ್ಲಿ ತೇಲಿತು. ನಿಮಿಷ ಮಾತ್ರ ಯಾವುದೋ ಭಾವ ಅವಳ ಮುಖ ದೇಹಾದ್ಯಂತವನ್ನೂ ಆಳಿ ಮರೆಯಾಯಿತು. ಮರಳಿ ಬೇಡಿದಳು—

‘ ನನಗೆ ಮೋಸ ಮಾಡಬೇಡಿ. ’

‘ ಮೋಸ....? ’

‘ ಮೋಸವಲ್ಲದೆ ಏನು ? ’

‘.......................’

‘ ನಿಮಗೆ ಸೋತಿದ್ದೇನೆ; ಒಂದು ನಿಮಿಷ ತೆಗೆಯಿರಿ.’

‘ ಆ....ಗು....ವು....ದಿ....ಲ್ಲ. ’

‘ ನನ್ನ ಪ್ರೇಮಕ್ಕೆ ಇದೆ ಪ್ರತಿಫಲವೆ ? ’

‘ ನಿನ್ನ ಪ್ರೇ....ಮ....? ’

‘ ಸೆರಗೊಡ್ಡಿ ಬೇಡುತ್ತೇನೆ....’

‘ ಉ....ಹುಂ....’

‘ ಕೈಯಲ್ಲಿ ವೀಳೆಯವಿದೆ. ’

‘.......................’

‘ ಹೂಗಳಿವೆ; ಗಂಧವಿದೆ.’

‘.....................’

‘ ಇವತ್ತು ನನ್ನನ್ನು ನೋಡಿ.’

‘.....................’

‘ ನನ್ನ ಪ್ರೇಮವನ್ನು ನೋಡಿ.’

ವಾಸು ಮನಸ್ಸು ಕರಗಿ ನೀರಾಯಿತು. ಆ ಚೆಲುವೆಯನ್ನು ಅಷ್ಟು ನೋಯಿಸುವುದೆ? ಅವಳನ್ನು ಸ್ವೀಕರಿಸುವುದಕ್ಕೆ ಎರಡು ಕೈಗಳನ್ನೂ ಚಾಚಿದನು. ಅವಳು ಅಳುತ್ತಿದ್ದಳು; ನಗುತ್ತಿದ್ದಳು; ಮಧುರಳಾಗಿದ್ದಳು; ಮನೋಹರಳಾಗಿದ್ದಳು; ರೂಪವತಿಯಾಗಿದ್ದಳು. ಕೈ ಚಾಚಿದ್ದನ್ನು ನೋಡಿ—

‘ ಅದನ್ನು ತೆಗೆಯಿರಿ; ಈ ನಿಮಿಷ ಬರುತ್ತೇನೆ’ ಎಂದಳು.

ವಾಸು ಉದ್ವಿಗ್ನನಾಗಿ ಭಾವಮತ್ತನಾಗಿ ‘ ಯಂತ್ರ’ವನ್ನು ಕಿತ್ತುಹಾಕಲು ಕೈ ಹಾಕಿದನು. ಥಟ್ಟನೆ ನಡುಗಿ ವಿಕಟ ಕ್ಷೀಣ ಸ್ವರದಲ್ಲಿ—

‘ ಇಲ್ಲ; ತೆಗೆಯುವುದಿಲ್ಲ, ಎಂದು ಚೀರಿದನು. ಹೊರಗೆ ಬಾಗಿಲು ತೆಗೆಯುವಂತೆ ಶಬ್ದವಾಯಿತು. ಆ ಕ್ಷಣ ‘ ಅವಳು ’ ಮಾಯವಾಗಿದ್ದಳು.

* * * *

ನಡೆದ ಸಂಗತಿಯೆಲ್ಲ ಬೆಳಗ್ಗೆ ದೇವೀ ನರಸಯ್ಯನಿಗೆ ತಿಳಿಯಿತು. ಅವನು ವಾಸುವಿನ ಮುಂದೆ–‘ ಇನ್ನು ಭಯವಿಲ್ಲ ಸ್ವಾಮಿ, ಗೆದ್ದಿರಿ: ಆದರೆ ಆ ಬಡ್ಡೀ ಹೆಣ್ಣು ಇನ್ನೂ ನಾಲ್ಕೈದು ದಿನ ಹತ್ತಿರ ಬರ್ತದೆ; ಹೀಗೇ ‘ ಪಂದು ’

ಮಾಡಬೇಕು. ಥಳಕಿಗೆ ಬೆರಗಾದೀರಿ' ಎಂದು ಎಚ್ಚ ರಿಸಿ ಹೊರಟುಹೋದನು.

ನರಸಯ್ಯನ ಮಾತಿನಂತೆಯೇ 'ಅವಳು' ಪ್ರತಿ ರಾತ್ರಿಯೂ ಬರುತ್ತಿದ್ದಳು. ಅತ್ತು, ಗೋಳಿಟ್ಟು, ಬೇಡಿ ಸಾಕಾಗಿ ಹೊರಟುಹೋಗುತ್ತಿದ್ದಳು. ಕ್ರಮೇಣ ಹಾಗೆ ಬರುವುದೂ ನಿಂತುಹೋಯಿತು. ವಾಸುವೂ ದೇಹಸ್ಥಿತಿ ಯಲ್ಲಿ ಸ್ವಲ್ಪಸ್ವಲ್ಪವಾಗಿ ಚೇತರಿಸಿಕೊಳ್ಳುತ್ತ ಬಂದ. ವೆಂಕಟರಮಣಯ್ಯನವರ ಆನಂದಕ್ಕೆ ಪಾರವೇ ಇಲ್ಲ. ಮೃತ್ಯುವಿನ ಬಾಯಿಗೆ ಸಿಕ್ಕಿದ್ದ ಮಗನನ್ನು ಉದ್ಧಾರ ಮಾಡಿದ್ದಕ್ಕಾಗಿ ದೇವೀ ನರಸಯ್ಯನಿಗೆ ಮರ್ಯಾದೆ ಸಲ್ಲಿಸಲು ಯೋಚಿಸಿದರು. ಆದರೆ ಅವನು ಯಾವ ಸನ್ಮಾನವನ್ನೂ ಸ್ವೀಕರಿಸಲಿಲ್ಲ.

* * * *

ನಾಲ್ಕು ವರುಷ ತಳ್ಳಿತು.

ಎಲ್ಲ ಸಂಸಾರಗಳಲ್ಲಿ ನಡೆಯುವಂತೆ ವೆಂಕಟರಮಣಯ್ಯ ನವರ ಸಂಸಾರದಲ್ಲಿಯೂ ಬದಲಾವಣೆಗಳಾಗಿದ್ದುವು. ವಾಸೂಗೆ ಪ್ರಸ್ತವಾಗಿ ಮೂರು ವರ್ಷಗಳ ಹತ್ತಿರಕ್ಕೆ ಬಂದಿತ್ತು. ಅವನಿಗೆ ಆ ಕಾಲದಲ್ಲೇ ಮೈಸೂರಿಗೆ ವರ್ಗ ವಾದುದು. ತಂದೆತಾಯಿಗಳಿಗೆ ಮಗ-ಸೊಸೆಯರನ್ನು ಬಿಟ್ಟಿರಲು ಮನಸ್ಸಿಲ್ಲದಿದ್ದರೂ ಮೈಸೂರಿನಂತಹ 'ಪಟ್ಟಣ ವಾಸ'ಕ್ಕೆ ಅವರ ಮನಸ್ಸು ಒಗ್ಗಲಿಲ್ಲ. ಆದ್ದರಿಂದ ನರಸೀ ಪುರದಲ್ಲಿಯೇ ನಿಂತರು.

ಈಚೆಗೆ ಸುಂದರಮ್ಮ ಮುದ್ದಾದ ಗಂಡು ಕೂಸಿನ ತಾಯಿಯಾಗಿದ್ದಳು. ಬಾಣಂತನಕ್ಕೆ ಅತ್ತೆಯೇ ಬಂದಿ

ದ್ದರು. ಮೊಮ್ಮಗನನ್ನು ಕಂಡ ಅವರ ಸಂತೋಷ ಹೇಳ ತೀರದು.

ವಾಸು ಸಂಸಾರದಲ್ಲಿ ಸುಖಿ. ಈ ಸುಖದಲ್ಲಿ, ಇಂಥ ಹೆಂಡತಿಯನ್ನು ಹೊಂದಿದ ಹೆಮ್ಮೆಯಲ್ಲಿ, ಕೊರಳಿನಲ್ಲಿದ್ದ 'ತಾಯಿತು' ಕೊಂಡಿ ಸವೆದು ಎಂದೋ ಬಿದ್ದುಹೋಗಿದ್ದುದು ಅವನ ಗೋಚರಕ್ಕೆ ಬರಲಿಲ್ಲ. ತನಗೆ ಬರುವುದು ಮೂವತ್ತೇ ರೂಪಾಯಿಗಳ ಸಂಬಳವಾದರೂ ಸುಂದರಮ್ಮನಂಥ ಗುಣವಂತೆಯ, ಜಾಣೆಯ, ರೂಪವತಿಯ ಸಂಬಂಧದಿಂದ ಆ ಸಂಬಳ ಮುನ್ನೂರೇ ಆಗಿತ್ತು. ಅವಳಲ್ಲಿ ಅವನಿಗೆ ಜೀವ; ಇವನಲ್ಲಿ ಅವಳಿಗೆ ಪ್ರಾಣ. ಹೀಗಾಗಿ ಅವರ ಸಂಸಾರ ನಿರಾತಂಕವಾಗಿ ಸಾಗಿತ್ತು.

ಈ ಮಧ್ಯೆ ವೆಂಕಟರಮಣಯ್ಯನವರು ಖಾಯಿಲೆ ಮಲಗಿದರು. ಮೊದಲು ಮೊದಲು ಮಗನಿಗೆ ತಿಳಿಸಿದರೆ ಗಾಬರಿಯಾಗುತ್ತಾನೆಂದು ಅವರು ವಾಸೂಗೆ ಬರೆಯಲೇ ಇಲ್ಲ. ಅಲ್ಲದೆ ಮಾತನಾಡಿದ್ದಕ್ಕೆ ಅಲ್ಲಿಂದಿಲ್ಲಿಗೆ ಬಂದು ಹೋಗುವುದು ಸುಲಭವಲ್ಲ. ಕಛೇರಿಯಲ್ಲಿ ರಜಾ ಸಿಕ್ಕುವುದು ತಾನೆ ಹೇಗೆ? ಹೀಗೆ ಯೋಚಿಸಿ ಅವರು ಸುಮ್ಮನಾಗಿದ್ದರು. ಕೊನೆಗೆ ಹೆಂಡತಿಯ ಒತ್ತಾಯದಿಂದ ಮಗನಿಗೆ ಕಾಗದ ಬರೆದರು.

ಕಾಗದ ವಾಸು ಕೈಗೆ ಮೂರನೆಯ ದಿನವೇ ಸೇರಿತು. ನೋಡಿ ಅವನಿಗೆ ಗಾಬರಿಯಾಯಿತು. ಅವತ್ತು ಮಧ್ಯಾಹ್ನವೇ ಕಛೇರಿಯಲ್ಲಿ ಹೇಳಿಬಿಟ್ಟು ನಿಂತು ನಿಂತಹಾಗೆಯೇ ಹೊರಟುಬಿಟ್ಟ.

ವಾಸು ಹತ್ತಿದ್ದ 'ಬಸ್ಸು' ದುರದೃಷ್ಟದಿಂದ ಕೆಟ್ಟು

ಹೋಗಿ ತಿರುಮಕೂಡಲಿಗೆ ಒಂದು ಮೈಲಿ ದೂರದಲ್ಲಿ ನಿಂತುಹೋಯಿತು. ಏನು ಮಾಡಿದರೂ ಮುಂದೆ ಹೋಗ ಲಿಲ್ಲ. ಹೆಚ್ಚು ಸಾಮಾನು ತಂದಿದ್ದ ಪ್ರಯಾಣಿಕರು ಅಲ್ಲಿಯೇ ನಿಂತು ರಾತ್ರಿಯ ವೇಳೆಗೆ ಬರುವ ಬಸ್ಸನ್ನು ಇದಿರು ನೋಡುತ್ತಿದ್ದರು. ವಾಸುವಿಗೆ ಗಂಟುಮೂಟೆ ಯಾವುದೂ ಇರಲಿಲ್ಲ. ಒಂದು ದಿನ ನಿಲ್ಲುವುದಕ್ಕೆ ಮಾತ್ರ ಬೇಕಾದ ಪಂಚೆ ಚೌಕಗಳು ಕೈಲಿದ್ದ ಬಲೆಯ ಚೀಲ ದಲ್ಲಿತ್ತು. ರಾತ್ರಿ ಎಂಟು ಗಂಟೆಗೆ ಮತ್ತೊಂದು ಬಸ್ಸು ಅಲ್ಲಿಗೆ ಬರುವ ನಿರೀಕ್ಷೆಯಿತ್ತು. ಆದರೆ ಎರಡು ಮೈಲಿ ದೂರದಲ್ಲಿದ್ದ ನರಸೀಪುರಕ್ಕೆ ನಡೆದು ಹೋಗುವುದು ಅಸಾ ಧ್ಯವೇನಲ್ಲ, ಅಲ್ಲದೆ ತಂದೆಯನ್ನು ಬೇಗ ನೋಡಬೇಕೆಂಬ ಕಾಂಕ್ಷೆ. ಆದ್ದರಿಂದ ಹಾಗೆಯೇ ನಡೆದು ಹೊರಟುಬಿಟ್ಟನು.

ನಡು ಬೇಸಗೆ; ಹೊಳೆಯಲ್ಲಿ ಮಂಡಿಯುದ್ದದ ಮೇಲೆ ನೀರಿರಲಿಲ್ಲ. ದಾಟುವುದಕ್ಕೇನೂ ಕಷ್ಟವಲ್ಲ. ಇನ್ನೂ ಸಾಯಂಕಾಲ ಏಳು ಗಂಟೆಯ ಸಮಯ; ಸ್ವಲ್ಪ ವೇಗ ವಾಗಿ ನಡೆದರೆ ಅರ್ಧ ಗಂಟೆಯ ಹೊತ್ತಿನಲ್ಲಿ ನರಸೀಪುರ ವನ್ನು ಸೇರಬಹುದು.

ವಾಸು ಹೊಳೆಯನ್ನು ದಾಟಿ ಆಕಡೆಯ ದಡವನ್ನು ಸೇರಿದ. ಸ್ವಲ್ಪ ಸ್ವಲ್ಪ ಬೆಳಕು ಇನ್ನೂ ಇತ್ತು. ಅವಸರ ವಾಗಿ ನಡೆಯತೊಡಗಿದ. ದಡದ ಪಕ್ಕದಲ್ಲಿ ಅದೇ ಹಳೆಯ ಮರ. ಮೊದಲಿನಂತೆಯೇ ಹಬ್ಬಿ ಚಾಚಿಕೊಂಡಿತ್ತು. ಅದರ ಕೆಳಗೆ ಬಂದು ಮುಂದೆ ಹೋಗಬೇಕು. ಅಲ್ಲಿ ಬಂ ದಾಗ ವಾಸು ಮನಸ್ಸು ಏನೋ ಒಂದು ಬಗೆಯಾಯಿತು. ಮಸಕುಮಸಕಾಗಿದ್ದ ನಾಲ್ಕು ವರುಷದ ಹಿಂದಿನ ಅನು

ಭವ ಮನಸ್ಸಿನಲ್ಲಿ ಉಜ್ವಲವಾಯಿತು. ಹಿಂಪೆ, ಇಲ್ಲೇ ಇದೇ ಮರದ ಕೆಳಗೆ ಏನನ್ನೋ ನೋಡಿದ್ದ. ಈಗ ಪುನಃ ಅಲ್ಲಿ ಯಾರೋ ನಿಂತಿದ್ದಂತೆ ಕಾಣಿಸಿತು. ವಾಸು ಒಂದು ಸಲ ನಡುಗಿದ, ನಡುಗಿ, ಅದು ಮನಸ್ಸಿನ ಭ್ರಮೆಯೋ ಏನೋ ಎಂದು ಕಣ್ಣುಜ್ಜಿಕೊಂಡು ನೋಡಿದ. ಅಲ್ಲ; ಭ್ರಮೆಯಲ್ಲ. ಅವಳೇ ಇವಳು! ಅದೇ ನೋಟ; ಅದೇ ನಗು; ಅದೇ ನಿಲುವು; ಅದೇ ಬಿಳಿಯ ಸೀರೆ.

ಕಿಲಕಿಲನೆ ನಕ್ಕಂತಾಯಿತು........ಮೈಮೇಲೆ ಆರತಿ ಎರಚಿದಂತಾಯಿತು........ನೀರಿನಲ್ಲಿ ಧು ಡು ಂ ಎಂದು ಧುಮುಕಿದಂತಾಯಿತು........ಕೊಂಬೆಗಳು ಮರಮರ ಎಂದಂತಾಯಿತು........ಗಾಳಿ ಗೋಳಿನ ದನಿಯಲ್ಲಿ ಬೀಸಿದಂತಾಯಿತು........ವಾಸು ಮೈಯೆಲ್ಲ ಬೆವತುಹೋಯಿತು. ಒಂದು ಸಲ ಧೈರ್ಯ ತಂದುಕೊಂಡು ಆಕಡೆ ತಿರುಗಿ ನೋಡಿದ. ಯಾರೂ ಕಾಣಿಸಲಿಲ್ಲ. ಎಲ್ಲ ಶೂನ್ಯವಾಗಿದ್ದಂತೆ ತೋರಿತು.

ಕಾಲು ಎಳೆದುಕೊಂಡು ಮನೆಗೆ ಬಂದು ಸೇರಿದ. ಖಾಯಿಲೆಯ ತಂದೆಯೊಡನೆ ಏನೇನೋ ಮಾತಾಡಿದ; ಹೇಗೆ ಹೇಗೋ ಊಟ ಮಾಡಿದ; ರಾತ್ರಿ ಮಲಗಿಕೊಂಡ. ಅರ್ಧ ರಾತ್ರಿಯ ಸುಮಾರಿಗೆ ಜ್ವರ ಬಂದಿತು.

* * * *

ವೆಂಕಟರಮಣಯ್ಯನವರು ಮಗನನ್ನು ಕಳೆದುಕೊಂಡು ವರುಷಗಳಾಗಿವೆ. ಆ ಮುದುಕ ಗಂಡ–ಹೆಂಡತಿಯರು ಬದುಕಲಾರದೆ ಬದುಕಿದಾರೆ. ಸುಂದರಮ್ಮ ಹುಚ್ಚಿಯ ಹಾಗಿದಾಳೆ.

# ನಿಂಗನ ಪ್ರೇಮ



I sing with a tearful cadence
For one who stands in the dark,
And knows that his last, best arrow
Has bounded back from the mark.

—E. W. W.

೧

" ಏಚನ್ನಿ.......ಚನ್ನೀ.......ಚನ್ನೀೕೕ........? "

"................"

" ಅದ್ಯಾಕ ಚನ್ನೀ.......ಮಾತ್ನಾಡಾಕಿಲ್ವಾ....? "

"................"

" ಅಯ್! ಯಾಕಿಂಗೆ ಸೆಟಕೊಂಡು ಕುಂತಿದ್ದೀ..... ಕೋಪಾನಾ ನನ್ಮೇಗೆ......."

"................"

" ನಿನ್ನೆ ಬರ್ಲಿಲ್ಲಾಂತಾನಾ? "

"................"

" ಬುಡ್ ಬುಡೇ! ಕಂಡವ್ರು ಇವೆಲ್ಲಾ.......ಏನ್ ಅಂದೊಳಂಗ್ಗೇಳ್ತೀ.........ಗೊತ್ತಾಗ್ಲಿಲ್ವಾ ನಿಂಗೆ......... ಅಸ್ಟೂನೂ....ಯಾಕ್ಬರ್ಲಿಲ್ಲಾಂತ? "

"................"

" ನೋಡೂ—ಮತ್ಪುನಾ ಸುರೂ ಅ ಚ್ಚು ಟ್ಟು ಲ್ಲಾ ನಿನ್ನನುಮಾನ್ದ ಪುರಾಣಾವಾ...."

"................"

" ಅದ್ಯಾಕಂಗ್ ಸರ್ಕೊಂಡ್ತೀ....ನಾನತ್ರ ಬಂದ್ಕುಂತ್ಕಂಡ್ರೇ.....ನಾನೇನ್ ಎಡಗೈಯ್ಯೋನು ಕೆಟ್ಟೋದ್ನಾ? "

"................"

" ಇಲ್ಲಾ ಚನ್ನೀ....ನಿನ್ನಾಣ್ಗೂ ಯೋಳ್ತೀನ್ಕೇಳೂ ....ಬಸ್ಸಿತಾಕೋಗಿರ್ಲಿಲ್ಲಾ....ಕಂಡಿತಾ ಓಗಿರ್ಲಿಲ್ಲಾಂತ

ಪ್ರಮಾಣ ಮಾಡೇಳ್ತೀನೀ..........ಕೈಯಾಗ್ಕರ್ಪೂರಾ ಅಚ್ಕೊಂಡು ಗುಡಿಲೀ...."

"..............."

"ಯಾತ್ಕೇ....ಅಂಗ್ಕೊಸರ್ತೀ ಕೈನಾ....ಮುಟ್ಬಾರ್ದಾ ನಾನಿನ್ಕ.......? ಆಣೇ ಮಡ್ಗಿದ್ರೂನೂವೇ ಆಗ್ಲಿಲ್ವಲ್ಲಾ ಸಮಾಧಾನಾ ನಿನ್ಗಿನ್ನೂವೇ!"

"..............."

"ಅಳ್ ಕಣೇ ಮಾರಾಯ್ಗಿತ್ತೀ....ಆಣೇಮಡ್ಗೀ ಸುಳ್ಕೀಳೀರೇ ಮನೇ ಉಳ್ದಾತೇನೇ....ನೀನೇ ಏಳು?"

"..............."

"ನೋಡ್ಚನ್ನೀ! ಸುಂಸುಮ್ಕೆ ಅಂಗೆಲ್ಲಾ ರೇಗಿಸ್ಬೇಡಾ ....ಕೋಪಾಬಂದ್ರೆ ನಾನ್ಬಲ್ ಕೆಟ್ಬಂವಾ....ಎಂಪೆಂದ್ಕಂ ಡಿಪ್ದೀ ನೀನು?..........ಸುಳ್ಕೀಳೋದು ನಮ್ಮೋರ್ಗೆಲ್ಲಾ ಸಾದಾರ್ಣಾ ಅನ್ಕೋಡ್ಕ?"

"..............."

"ಅಯ್ಯಯ್ಯೋ....ನಾನೊಡೀಜೇಕೂಂತ ಒಡೀನಿಲ್ಲಾ ಕಣ್ ಚನ್ನೀ........ಚನ್ನೀ........ನಾಕ್ಬೆಳ್ಳೂ ಕಾಣ್ತದಲ್ಲೇ ನಿನ್ಬೀಳೀರಿಟ್ಬೇನ್ಮೇಗೆ.......ತಪ್ಪಾಯ್ತೂಂತೀನ್ಕಣೇ....... ಮರ್ತ್ಬುಡು."

"..............."

"ಇಲ್ಲಾ ಚನ್ನೀ....ಕೋಪ್ದಾಗೆ ಮಾತು—ಕೈ ಜಬರ್ದಸ್ತಾಗೋಯ್ತು....ನಿನ್ಮುಂದೆ ಜಬರ್ದಸ್ತೀ ಮಾಡೇನಾ.... ನಾನೆಂದಾರ...."

"..............."

“ಚನ್ನೀ! ಸತ್ಯಾಗೇಳ್ತೀನೀ ಕೇಳು........ಆ ದಿನ ನೀನ್ನೋಟ್ಟೆಲ್ಲೋಡ್ದಾಗ...ನಾನೂ ಗಿಡಕ್ಕೀರು ಬುಟ್ಟೇ, ಒಸೀ ಸುದರಾಯ್ಸ್ಕೊಳ್ಳೋವಾಂತಾ ಅಂಗೇನೇ ಬಾವಿ ಕಟ್ಟೇಮೇಗ್ ಕುಂತಿದ್ದೀ. ಆಗ್ಬಸವೀ ನೀರಿಗ್ಬಂದ್ಲೂ.... ಸುಮ್ಕಿರೋಕಾಯ್ತದಾ.....‘ಚೆಂದಾಗಿದ್ದೀಯೇನಪ್ಪಾಂ’ತ ಪಡ್ತ್ರಾತಂದೆ....ಅದ್ಕವ್ಳು.........‘ಚೆಂದಾಗಿರೋದ್ಕೇನಪ್ಪಾ ಬಂದವೆ ದಾಡೀ....ನಿನ್ನಂತೋನೊಬ್ಬ ಗಂಡ್ಸು ಅಟ್ಟೀ ಗಿರೋವಾಗಾಂ’ತ ನಾಕ್ತ್ರಾತಂದ್ಳು. ನಾನ್ನಕ್ಬುಟ್ಟೆ.... ಅವಳೂನೂವೆ ನಕ್ಬುಟ್ಳು....ಆಗ್ಲೇ ನೀನ್ನೋಟ್ಟೋಳೀಕ್ಬಂದದ್ದು. ಅವಳ್ನೀರೆತ್ಕೊಂಡೋದ್ಲು........ನಾನ್ನಿನ್ನತ್ರಾ ಡಸ್ದ್ರು ನೀನ್ಬಾಯೇ ಬಿಡ್ಲಿಲ್ಲಾ ಯಾಸಟ್ಕೋ ಓಗ್ಲಿ ಬುಡು ........ಮುನಸ್ಕೊಂಡವ್ಳೆ........ಅಟ್ಟೀಲೇನ್ ತಾಪತ್ರಯಾ ಬಂದ್ಬುಟ್ಟೈತೋ ಅಂತ ನಾನ್ಸಂಕೆ ಇದ್ಬುಟ್ಟೆ. ಅಷ್ಟೇ ನೋಡು ಆದ್ದ....”

“...............”

“ನಿನ್ಗೆ ಯಾಕ್ಬರ್ಲಿಲ್ಲಾಂತಿಯೋ....ಏಳ್ತೀನ್ಕೇಳು.... ....ಶಾನುಬಾಗರು ಏಕ್ಕಳ್ಸಿದ್ರು....ಸಂಜೇಲೋಗಿದ್ದೆ.... ....ಅಂಗೇ ಮಾತಾಡ್ತ ಕುಂತ್ಬುಟ್ಟೆ....ಬರಾಕಾಗ್ಲಿಲ್ಲಾ ನಿಂತಾವ್ಕೆ......ಬೇಕಾರೋಗ್ಕೇಳು ಅವರ್ನೇಯ......ನೀನೇ ನೇನೋ ಅಪಾರ್ತ ಮಾಡ್ಕೊಂಬುಟ್ಟು ಮುನಸ್ಕೊಂ ಬುಟ್ಟೆ....”

“...............”

“ಇಲ್ಲಾ ಚನ್ನೀ! ನಿಂಗನ್ಮ್ಯಾಯು ಮಾತೇನಾ?”

“...............”

"ಔದೂ ನೋಡ್ದ್ನಿನ್ನೀ! ನನ್ಗೇನೋ ಒಂತರ ಕುಸಿ ನಿಂತಾವಿರೋದ್ಕೆ........ನಿನ್ಕಂಡಾಗ್ನೆಲ್ಲಾ ನಂಗೆಂಗೆಂಗೊ ಆಯ್ತದೆ ನೋಡು....ಒಂದೇ ಸನ್ಕೆ ನಿಂತಾವ ಕುಂತ್ಕೊಂ ಬುಟ್ಟು ಮಾತಾಡ್ತಿರಾವಾಂತ ಅನೀಸ್ತದೆ ಜೀವ್ಕೆ....ಆದ್ರೇ ....ನಡೀಬೇಕಲ್ಲಾ ನೇಗ್ಲು....ಮುಂಜಾನಿಂದ ಸಂಜೇತಕಾ ಒಕ್ಕಲಿಗ್ನು ಚಕ್ಕೀ ತಿನ್ಕೊಂಡಿರಾಕಾಯ್ತದಾ? ಇಟ್ಕೊನೂ ಉಣ್ಬೇಕು.......ಅಲ್ವಾ ಚನ್ನೀ....?

"..............."

"ಅಯ್ಯಯ್ಯೋ.......ದ್ಯಾವ್ರೇ.......ಅಳ್ಬೇಡಾ ಓಗ್ಲಿ ಸುಂಕಿರ್ ಚನ್ನಿ....ಕಾಲಿಗ್ಬೀಳ್ತೀನಿ, ತಪ್ಪಾಯ್ತೂ.... ಸುಂಕಿರೆ....ನಾನೇನೂ ಚಿವುಟ್ಬೇಕೂಂತೇನೂ ಚಿವುಟ್ಲಿಲ್ಲಾ ಕಣ್ ಚನ್ನೀ....ಕಂಡಿತಾ ಇಲ್ಲಾ....ಜೀವ್ಕೇನೋ ಬಲ್ ಕುಸೀ ಆಗೋಯ್ತು ನೀನಂದಿದ್ಕೆ....ಇದ್ದಿದ್ದಂಗೇ ಆಳಾದ್ ಕೈ ಅಂಗಾಗ್ಬುಡ್ತು....ಸೂಲ್ಪಾದ್ರೂ ಗೊತ್ತಾಗ್ಲಿಲ್ಲಾ ನಂಗೆ ....ನೀನ್ಬಲಸ್ವುಗೀನಂಗೇಂತಾ.......ಆವಾಗ್ಲೇ ಒಂದೇ ಟಾಕ್ದೆ. ಈಗ್ಲಿ ವುಟ್ಬುಟ್ಬಳೀಸ್ದೆ.......ಇನ್ಮೊಸೀವೊತ್ತಿಗೆ ಇನ್ನೇನಾರಾ ಮಾಡಿ ಪುನಾ ಅಳಿಸ್ತೀನೋ ಏನ್ಕತ್ಯೋ? ನಾನೊಂವೆಲ್ಲೋ....ಒಳ್ಳೆಮ್ಕ...ಅಲ್ವಾ? ಏನ್ಮಾಡ್ಲೀಳು ಆಳಾದ್ದು ಒಂದೊಂದ್ಸಲೀಕೆ ಅಂಗಾಗೋತವೆ—ನಿನ್ನೀ ನೋಡ್ತಾನಿದ್ರೆ."

"..............."

"ಊ! ಔದು ಓಗಾನೇಳು ಅಟ್ಬೇಕಡೀಕೆ........... ಇನ್ನಾ ಕೋಪಾನಾ....ಚನ್ನೀ?

* * * *

"..............."

"ಇಲ್ಲಾ ಚನ್ನಿ! ಜಲ್ದ್ ಬಂದ್ಬುಡ್ತೀನಿ, ಮಾವ ಯ್ಯನು ಬೆಂಗ್ಳೂರಿಂದ 'ಅರ್ಜೆಂಟ್' ಬಂದ್ಬುಡು ಸರ್ಕಾರೀ ಚಾಕರೀಗ್ಮಡಗ್ತೀನಿ, ಬರ್ದಿದ್ರೆ ಬಾಳಾ ನುಕ್ಸಾನಾಯ್ತು ದೇಂತ ಕಾಜಗ ಆಕಾನೆ.

"..............."

"ಇರಬೌದು, ಸರ್ಕಾರ್ಕೇ ನು ಕ್ಸಾ ನಾ ಯ್ತ ದೋ ಏನೋ? ಮಾವಯ್ನೇನು ಕಮ್ಮಿ ಇಸ್ಮಲ್ಲಾ, ಸರ್ಕಾರಿ 'ಆಪೀಸ್'ನಲ್ಲಿ ಆಗೋದೋಗೋದೆಲ್ಲಾ ಅವನಿಗ್ಗೊತ್ತು."

"..............."

"ಬಾಳಾ ಮಾಡಿ ಇನ್ನೇಡ್ಮೂರು ತಿಂಗಳ್ಗೇ ರಜಾ ಬರ್ದಾಕ್ಬುಟ್ಟು ಬಂದ್ಬುಡ್ತೀನಿ ಚನ್ನೀ. ಎದರ್ಬೇಡಾ."

"..............."

"ಊ! ಬರೋವಾಗಂಗೇನೇ ಮಾವಯ್ನೂ ಇಂದ್ಗಂಟೇನೇ ಕರ್ಕೊಂಬಂದೀ, ಎಲಿನಾಸ್ತ್ರಾ, ನಗ್ನಾ ಎಲ್ಲಾ ತೀರಸ್ಕೊಂಬುಟ್ಟು....ಅಂಗೇನೇ ನಿನ್ಕರ್ಕೊಂಡೊಳ್ತೊದೇ ಬೆಂಗ್ಳೂರ್ಗೆ."

"..............."

"ರಾಣಿ....ರಾಣಿ ಮಡಗ್ದಂಗೆ ಮಡಗ್ತೀನೀ ಚನ್ನೀ ನಿನ್ನ, ಬೆಂಗ್ಳೂರ್ನಾಗೇ."

* * * *

"ಏನ್ತಮ್ಮಣ್ಣಾ? ಚೆಂದಾಕಿದ್ದೀಯಾ?"

"..............."

"ಇಗೋ ನೋಡಪ್ಪಾ, ಈಗ್ಲೇಯ ಬಂದದ್ದು.

ಎಲ್ಲಾ ಚೆಂದಾಕವ್ರೋ? ಏನ್ ಸುದ್ದೀ?"

"..............."

"ಆ? ಚನ್ನೀ....ಚನ್ನವ್ವನ್ ಮದ್ವೇ ಆಗೋಯ್ತಾ? ಯಾರೊಂದ್ಗೇ?"

"..............."

"ಓ!....ಆ? ಏನೂ ಇಲ್ಲಾ ಕಾಣಪ್ಪ. ಒಸೀ ದೀಸ್ದಿಂದಾ ಜೀವಕ್ಕೆಷ್ಟಿಲ್ಲಾ. ಅಸ್ಟೇ. ಸರ್ಕಾರಿ ಚಾಕರೀ ತಲೆ ತಿಂದೋಯ್ತದೆ....ಬತ್ತೀನ್ ತಮ್ಮಣ್ಣಾ."

"..............."

"ಇಲ್ಲಪ್ಪಾ ಮದ್ಯಾನ್ದ ಗಾಡೀಗೇ ಒಂಟೆ. ಇರಾಕಾಗಾಕಿಲ್ಲಾ. ಬಾಳಾ ಕೆಲ್ಸಾ ಬಾಕಿ ಐತೆ ಬೆಂಗ್ಳೂರ್ನಾಗೆ......."

*   *   *   *

೨

"........ಈರೀ...."

"..............."

"....ಎದರ್ ಬ್ಯಾಡಾ ಈರೀ....ಡಾಕಟ್ರು ಏಳವ್ರೆ.... ಜಲ್ದಿ ಗುಣಾ ಆತೈತೆ ಅಂತ........ಇನ್ನೊಸೀ ದಿನ........ ಅಷ್ಟೆ........"

"..............."

"....ಈರೀ....ನೀನಂತೂ ಕೆಟ್ಮಾತಾಡ್ ಬ್ಯಾಡ್ದ........ ನೀನೇ ಯಿಂಗಾಡಿದ್ರೆ........ನನ್ಕೆಲ್ಲಿಂದ ಬತ್ತೈತ್ ಈರಿ.... ಧೈರ್ಯ........ಡಾಕಟ್ರು ಏನಂದ್ರೂನೂವೆ ನೀನುಳ್ದೀ ಯಾಂತ........ಆಸೆ ಮಾಡಿದ್ನಿ........ಆ ಆಸೇಯ ಉರೀ

ಲ್ದ ಬ್ಯಾಡೀರಿ...."

"..............."

"........ನನ್ನಷ್ಟೆ ಬೆಳ್ಳು ನೀನೂಂತ ತಿಳ್ದಿನ್ನಿ........ ಬೆಳ್ಳಿನ್‌ಕೆಡ್ಸಿ ಕತ್ತಲ್ಗವಿ ಮಾಡಿ, ನನ್ನದ್ರಾಗ್‌ತಳ್ಳಿ ನೀ ನೋಡ್ಬ್ಯಾರ್ದು........ನನ್ಜೀವ ನಿನ್‌ಕೈಯ್ಯಾಗೆ........ಅದ ರ್ಕವೆಗೊಲ್ಮೀನು......ನನ್ಮಣ್ಣಿಗ್ಕಿಡವ್‌ಬ್ಯಾಡಾ......ಬ್ಯಾಡಾ ಕಣೇರಿ........"

* * * *

"..............."

"....ಆಯ್ತು ನಂಜಣ್ಣ....ನನ್ಬದ್ಕು ಇಡಿ ಮಣ್ಣಾಗ್ಸಿ ಪ್ಲೋಯ್ತು...."

"..............."

"ಔದ್ ನಂಜಣ್ಣ....ಈರೀನ....ನೆನ್ನೆ ರಾತ್ರೆ ಸರ್ವೂ ತ್ನಲ್ಲಿ........ಮಣ್ಮಾಡ್ದೆ........ಪೊರೋರನ್ನಂಡ್ರೆ ದೇವ್ರಿಗೂ ನಗ್ಸಾರ........ಇನ್ನಾ ಒಸಿ ಪೂರೂಂತಾನೆ........ಸಾಕೂ ಕಣಪ್ಪ ನಂಗ್ಬದ್ಕು........"

"..............."

"....ಬ್ಯಾಡಾ ಮಾರಾಯ....ಸಾಕು ಈ ಬಂಡ್ಬಾಳು ........ಇನ್ನೇಲ್ಲೇ ಮದ್ವೇನೂ ಬ್ಯಾಡಪ್ಪ........ಈರಿ ಇದ್ದಿದ್ರಾಮಾತೇ ಬೇರೇಯಿತ್ತು............ಓತೀನ್ಬಿಡೂ ಎಲ್ಲಾರ........ಚಿಪ್ಪಿಡ್ಕಂಡು........"

* * * *

೩

"ಢಕಾ : ಢಕಾ : ಢಕ್' 'ಢಕಾ–ಢಕಾ–ಢಕ್'

' ಢಕಾ—ಢಕಾ—ಢಕ್........"

"..............."

" ಬುದ್ಧಿ....ನನ್ಕೈಲಾಗಾಕಿಲ್ಲಾ ಬುದ್ಧಿ....ಈವೊತ್ತು ಷ್ಟಾಂಪೊತ್ತ್ಕೋದು.... ಇನ್ಯಾರ್ನಾರಾ ಬುಡಿ."

" ಯಾಕೋ....?"

"........ಯಾಕೋ ಜೀವಕ್ಕೆಟ್ಗಿಲ್ಲಾ ಬುದ್ಧಿ....ವೊರ್ಗ ಡೀಕೇ ಇದ್ಕೊಂಡ್ಕೆಲ್ಸಾ ನೋಡ್ತಿನ್ನಿ...."

" ನಿನ್ನೇ ನಂಬ್ಕೊಂಡು ಸಾಹೇಬ್ರಿಗೂ ಹೇಳಿಬಿಟ್ನೆಲ್ಲೋ ಹತ್ತು ಸಾವ್ರ ಸ್ಟಾಂಪ್ ಆಗುತ್ತೇಂತ...."

"....ಔದೂ ಬುದ್ಧೀ....ನನ್ನಂಬ್ಕೊಂಡೇಳ್ಬುಟ್ರೇ.... ....ನಾನೇನ್ಮಾಡ್ಲೀ ನನ್ನೊಡ್ಯಾ ಅದ್ಕೆ........ನಾನ್ಯಾವತ್ತಾ ರ ತವ್ಮಾತುಳೀಸ್ದೇ ಯಿಂದ್ಬಿದ್ದಿದ್ನಾ ಬುದ್ಧಿ........ಈವೊತ್ತೇನೋ....ಜೀವಕ್ಕೆಟ್ಗಿಲ್ಲಾ....ಅದ್ರಿಂದಾ ಅಂಗ್ಕೇಳ್ದೆ.... ಮಾಪ್ ಮಾಡ್ಬುಡಿ ನನ್ನೊಡ್ಯಾ........ನಂಜಣ್ಣಾನ್ ಬುಡಿ ಬುದ್ಧಿ ಅದ್ಕೆ....ನಾನಿಲ್ಲೇ ಮಾಡ್ತೀನಿ...."

" ಆಗೋದಿಲ್ಲ....ಹೋಗು. ನೀನ್ಯಾಕೋ ಈನಡ್ವೆ ಕಳ್ಳೀಳ್ತಿದ್ದೀಯಾ........ಬೇಕಾದ್ರೆ ನಂಜನ್ನೂ ಜೊತೇಗೆ ಕರ್ಕೋ........ಇವೊತ್ತೂ ಹತ್ತು ಸಾವಿರ ಹೊಡ್ದೇ ತೀರ್ಬೇಕು...."

* * * *

" ಢಕಾ—ಢಕಾ—ಢಕ್........"

" ಇದ್ಯಾಕ್ಷಿಂಗಣ್ಣಾ....ಇಂಗಿದ್ದೀಯಾ ಇವೊತ್ತು ?"

"..............."

" ಅಟ್ಟೇಲೇನಾರಾ ಯಾವಾರಾ ಗೀವಾರಾ ಕಾದೋ

ಎಂಗೆ?"

"....ಯಾವಾರ್ಕೇನ್ ಕಮ್ಮಿ ನಂಜಣ್ಣ........ಯಾವ್ರೊ ತ್ನಂತೇ ಈವೊತ್ತ್ನೂ ಸೂ....ಇದ್ದೇ ಐತ್ಬುಡು...."

"ಕೆಂಪೀ ಸಿಟ್ಗಿದ್ದಿದ್ಲೋ ಇವೊತ್ತ್ನೂ ನೂ....?....ಇನ್ನಾ ಸಣ್ಣೋಳು....ಇವತ್ತಲ್ಲಿದ್ರೆ ನಾಳೇನಾರಾ ದಾರೀಗ್ಬತ್ತಾಳೆ ಬುಡು....ಯಸನಾ ಯಾಕ್ಮಾಡೀಯಾ...."

"ದಾರೀಗೆಲ್ಬಂದಾತು ನಂಜಣ್ಣ....ನಿಂಗೊಂದುಚ್ಚ್ಸು.... ....ನಿಂಗೇನೂ....ಸಂಗುಚ್ಚ್ಸು....ನನ್ನ ಸೀಬ್ ನೆಟ್ಗಿಲ್ಲಾ.... ಯಾರೇನ್ಮಾಡಾಕಾಯ್ತದೆ........ಚೆನ್ನೀನಾಗ್ಲಿ.......ಈರೀ ನಾಗ್ಲೀ ನಗ್ನ ಆಗಿದ್ದಿದ್ರೆ........ಅದರ್ಲಿಕ್ಯಾಶಾರಾನೇ ಬ್ಯಾರೇ ಇರ್ತಿತ್ತು. ಅವ್ರಾಗೊಬ್ರೂನೂ ಒಂದಿನಾನಾರಾ ನಗ್ನಸ್ರಕ್ಕೆ ನಂತಾವ ಯಾವಾರಾ ಕಾದಿರ್ಲಿಲ್ಲಾ........ಇಬ್ರೂ ಕೈ ತಪ್ಪೋದ್ರು....ಆಮೇಕಿಂದ ಆ ಕ್ಯಾತ್ನಳ್ಳಿ ಗೌಡನ್ಮಗಳು—ಲಕ್ಸ್ಮಿ ಕ್ರೆನ್ತಂದು ನಗ್ನಾ ಮಾಡ್ಲ ನಮ್ಮಾವಯ್ಯ....ನೋಡಾಕ್ಟಂದಾಕವ್ಳೆ ಅಂತಾ ನಾನೂ ಸಂತೋಸ್ವಾಗೊಪ್ಕಂಡೆ.... ಮದ್ವೇ ಆದ್ಮ್ಯಾಂಜಾನೇನೇ ಯಾರ್ಗೂ ಪತ್ತಿಲ್ಲದಂಗೇ ಗೌಡ್ನ ಆಳ್ಮಗ್ನಿಂದ್ಗುಂಟೀ ಅವ್ಳೋಡೋಗಿ ನನ್ಮೊಕ್ಕ್ಮೊರ್ಳಿರ್ಬುಟ್ಳು ....ಊ........ಬಂದವ್ರೆಲ್ಲೀ ಶಿವ್ನೇಂತ ನನ್ನಪ್ಟಕ್ಕಾನಿದ್ರೆ, ನಾನಿಲ್ಲಿವ್ನಿ ನೋಡೂಂತ ನನ್ಕೋಟಾ ನಸೀಬು ನಿಂತೋದೀತು....ಸುಮ್ಕಿರ್ನ್ವಾರ್ಲೆ....ಈ ಮಾರಾಯ್ಗಿತ್ತಿ ಕೆಂಪೀನ ನಗ್ನಾ ಮಾಡ್ಕಂಡೆ........ನೋಡ್ನಂಜಣ್ಣಾ ನಗ್ನಾ ಆದಿಂದೀಚ್ಗೆ ಒಂದಿನಾನಾರಾ ನಾವು ನೆಗ್ನೆಗ್ತಾ ಇದ್ದಿದ್ಕಾಣೋ..."

"........ಓಗ್ಲಿ ಬುಡೂ ನಿಂಗಣ್ಣ. ಯಾಕ್ಯೋಚ್ನೆ ಮಾಡೀಯಾ........ಎಷ್ಟಿನಾ ಇಂಗಿದ್ದಾತು. ನೋಡೋ

ತಕಾ ನೋಡಿ ಅವಕ್ಬರ್ಟೇನಿಪ್ರೆ ತೆಗ್ದ್ಳ್ಡ್ಬುಟ್ರೆ ಸಿನ್ಮಾರೀಗೇ ಬತ್ತಾಳೆ....''

"....ಅಯ್ಯೋ!........ಅದೆಲ್ಲಾ ನಡ್ಯಾಕಿಲ್ಲ ನಂಜಣ್ಣಾ. ನೋಡೂ....ಎಂಟ್ಬೆನ್‌ದಿಂದೆ, ನನ್ಮೇಗಿನ್‌ಸಿಟ್ಗೆ....ಮಗಾನ ಬಾಯಾಗ್ರಕ್ತ ಕೀಳೋವಂಗೊಡವ್ನ. ನಂಗ್ನೋಡಾ ಕಾಗ್ನಿಲ್ಲ. ಸಿಟ್ಗಿದ್ದಪ್ಪೀಸ್‌ಬಿಡ್ತಿದ್ದೆ. ಆದ್ರಾಳಾದ್ ಕೈಯಿ ....ಎಂಗ್ಸೂಂತ ಎತ್ತಿಜ್ಯೋರ್ಸ್ಲೀಕೀನಿಲ್ಲ....ಇಲ್ಬಿದ್ರವಳು ಳೀತ್ರಿರ್ನಿಲ್ಲ....ಅವಳಷ್ಟ್ರಗೇನೆ ಕಿರ್ಲಿ ರಂಬಾಟ ಮಾಡಿದ್ಲು ........ಅವಳಣ್ತಂಬ್ಬೀರಿಬ್ರೂ ನುಗ್ಗಿ ನನ್ಬಡಪ್ಬುಟ್ರು.... ಅವತ್ಬಿಟ್ಟಿದ್ದು........ನನ್ಕಟ್ಟೇಕಡೀಕೆ ಇವೊತ್ತಿನ್‌ತಕಾ ಸುಳ್ಬಿರ್ನಿಲ್ಲ. ಆದ್ರಿವೊತ್ನೋಡೂ ಮಗೀನ್ನೆಪ್ಪಾಗಿ ಬಲ್ ಕಕ್ಕಡೀತು........ಒಸೀ ತಿಂಡೀ—ಪಂಡೀ ತಗೊಂಡೋಗಿ ಮಗೀಗ್ಕೊಡೋವಾಂತ ಅಟ್ಟೇಕಡೇ ಓಗಿ ದೂರ್ದಾಗಂಗೇನೇ ನಿಂತಿದ್ದೆ. ಮಗಾ ಪೊರಿಕ್ಬಂವದ್ಕಂಡು, ಕೂಗ್ತಿಂಡೀ ಕೈಯ್ಯಾಗ್ಮಡಗ್ದೆ....ಅಷ್ಟ್ರಾಗೇ ಬಂದ್ನಲ್ಲಪ್ಪಾ........ಮಾರಿ ಬಂದಂಗೆ..........ಮಗೀಗೆರಡ್ತಟ್ಟಿ, ಕೈಯ್ಯಾಗಿನ್ತಿಂಡೀ ಕಿತ್ತಿಸ್ದು, ದರದರ್ನೆಳಕೊಂಡೋದ್ನ........ಸುಮ್ಕಂಗೇನೇ ಬಂದೆ ಆಪೀಸ್ಗೆ....ದಾರೀಲ್ಬತ್ತಿದ್ರೆ........ಎಜ್ಜೆಜ್ಜೇನೂ.... 'ಎಂಡ್ರು—ಮಕ್ಳು—ಯಾರೋ' ಅಂತಿರೋದು..... ....ಇಲ್ಬಂದ್ರೆ....ಈ ಮಿಶೀನು—'ಥಕಾ—ಥಕಾ—ಥಕ್'

"'ಎಂಡ್ರು—ಮಕ್ಳು—ಯಾರೋ' ಅಂತಾ ಒಂದೇ ಸಮ್ನೆ ಬಡಕೊಂತದೆ........ಅದ್ಕೊಸ್ರ ಇವತ್ನನ್‌ಕೈಲಾಗಾಕಿಲ್ಲಾಂವ್ನಪ್ಪ........ಇನ್ಯಾತ್ಕೂ ಇಲ್ಲಾ...."

"........ಊ........ಸರಿಕಣಪ್ಪ........ಓಗ್ಲಿ ಸುಮ್ನೇ

ನಾರಾ ಕೈಲಂಗಿಡ್ಡಿರು....ನಾನೇ ವೊತ್ತೀನಿ....ನನ್ನಮ್ ತಾಪತ್ರಯ್ಗೋಳು ನೂರೆಂಟಿದ್ರೂನೂವೆ ಸರ್ಕ್ಕಾರ ಕೇಳಾತ? ....ಯಾವ್ದೆಂಗಾರಾ ಇರ್ಲಿ ಮಾಡೋ ಚಾಕ್ರಿ ಮಾಡೋಂತದೆ........"

"ಥಕಾ—ಥಕಾ—ಥಕ್........"

"ಎಂಡ್ರು—ಮಕ್ಳು—ಯಾರೊ........"



# ವೀಣೆ



ಪ್ರಾಣಾನಲ ಸಂಯೋಗಮುವಲ್ಲ
ಪ್ರಣವನಾದ ಸಪ್ತಸ್ವರಮುಲೈಪರಗ
ವೀಣಾವಾದನ ಲೋಲುಡೈ ಶಿವಮನೋ....

೧

ನಾನು ಮೊನ್ನೆ ಹಂಪೆಗೆ ಹೊರಟಿದ್ದಾಗ, ಹರಿಹರದ ಮುಖಾಂತರವಾಗಿ ಹೊರಟಿದ್ದರೂ, ಅಲ್ಲಿ ನಿಲ್ಲಲಿಲ್ಲ. ಅದ ರಿಂದ ನನ್ನ ಸ್ನೇಹಿತನಿಗೆ ಕೋಪಬಂದಂತೆ ತೋರಿತು. ಆ ಕೋಪವನ್ನಿಳಿಸುವುದಕ್ಕಾಗಿ, ಪಂಪಾ ಯಾತ್ರೆಯನ್ನು ಮುಗಿಸಿಕೊಂಡು ಹಿಂತಿರುಗಿದಾಗ ಅವನ ಮನೆಯಲ್ಲೇ ಇಳಿದೆ.

ಆ ದಿನ ಮಧ್ಯಾಹ್ನ 'ಟೀ' ಯನ್ನು ಕುಡಿಯುತ್ತಾ ಕುಳಿತಿದ್ದೆವು. ಅಷ್ಟರಲ್ಲಿ ಸಣ್ಣ ಹುಡುಗನೊಬ್ಬನು ಬಂದು ಬಾಗಿಲಿನಲ್ಲಿ ನಿಂತು, ನನ್ನ ಮಿತ್ರನ ಕಡೆಗೆರಡು ಸಲ ನೋಡಿ—

"ರಾಮುಕಿಚ್ಚೈನೋರೆ—ಮತ್ತೆ—ಅಪ್ಪ ಅವೇನೋ ಹೇಳಿದ್ರಂತೆ. ಅದು—ಏನ್ ಮಾಡಿದಿರೀಂತ........ ಕೇಳಿದ್ರು" ಎಂದನು.

"ಓಹೊ—ಪುಟ್ಟು! ನಿನ್ಗ್ಹೋಗಪ್ಪ ಇನ್ನೊಂದ್ಸ್ವೊಂಚ ಹೊತ್ನಲ್ಲಿ ನಾನೆ ಬರತೀನಿ ಅಂತ ಹೇಳು....ಲೇ! ಟೀ ಆಗ್ಹೋಯ್ತೇನೆ........ಆ."

ಉತ್ತರವು ಬಂದಂತೆ ತೋರಲಿಲ್ಲ. ಆದರೆ ಹುಡು ಗನು ಅಡಿಗೆಯ ಮನೆಯ ಕಡೆಗೆ ಹೊರಟನು. ರಾಮು ಕೃಷ್ಣಯ್ಯನು ನನ್ನ ಕಡೆಗೆ ತಿರುಗಿ—

"ಅಯ್ಯಾ—ಇನ್ನೊಂದು ವಿಷ್ಯ.—ನಿಂಗೇನಾದ್ರೂ ವೀಣೆ ಬೇಕೆನಯ್ಯ—?"

"ವೀಣೆ?"

"ಹೂ ಕಾಣಯ್ಯ—ಕೊಂಡ್ಕೋತೀಯಾ........"

"ಯಾರ್ದ್ಮನೇಲಿದೆ?"

"ಇಲ್ಲೀ....ಶಿವರಾಮಯ್ಯನೋರೂಂತಿದಾರೆ. ಹುಡ್ಗ ಬಂದಿರ್‍ಲಿಲ್ವೆ... ಅವರಪ್ಪ. ಅವರಾಗ್ಲೇ ಹೇಳಿ ಎಂಟ್ಟೆನ ಆಯ್ತು—ಮಾರಿಸ್ಕೊಡೂಂತ......ಹೋಗ್ನೋಡ್ಕೊಂಡು ಬರೋಣವೆ?........"

"ಹುಂ."

ಸರಿ. 'ಟಿ,' ಯನ್ನು ಮುಗಿಸಿಬಿಟ್ಟು, 'ಷರಟಿನ' ಮೇಲೊಂದು 'ಟವಲ' ನ್ನೇರಿಸಿಕೊಂಡು ರಾಮಕೃಷ್ಣನ ಜೊತೆಯಲ್ಲಿ ಹೊರಟೆ. ಎರಡು ಮೂರು ನಿಮಿಷಗಳಲ್ಲಿ ಶಿವರಾಮಯ್ಯನವರ ಮನೆಯು ಸಿಕ್ಕಿತು. ಒಂದು ಭಾಗವೆಲ್ಲ ಮುರಿದುಹೋಗಿತ್ತು. ಬೀದಿಯ ಕೊನೆಯ ಮನೆ.

ನನ್ನ ಮಿತ್ರನು—

"ಶಿವರಾಮಯ್ಯ! ಓ ಶಿವರಾಮಯ್ಯ!" ಎಂದನು.

ಕೊಂಚ ಹೊತ್ತಾಯಿತು. ಆಮೇಲೆ ಅವರೇ ಹೊರ ಬಾಗಿಲಿಗೆ ಬಂದು, ಅರೆನಗುವಿನಿಂದ—

"ಹಿತ್ಲಲ್ನೀರ್‍ಹಾಕುತ್ತಾ ಇದ್ನಪ್ಪ.......ಬಹಳ ದಗೆ ಕಾಣಪ್ಪ.. .....ಇವ್ರ್ಯಾರು....?" ಎಂದರು.

"ಇವ್ರು........ನನ್ನ ಜೊತೇಲಿ ಓದ್ತಾಯಿದ್ರು. ಹಂಪೇಗೆ ಬಂದಿದ್ರು........ಬೆಂಗಳೂರಿಗೆ ಈ ದಿನ ರಾತ್ರಿ ಹೊರಡತೀನಿ ಅಂತಾರೆ........ಏನೋ ಹಾಗೇ—ವೀಣೆ ನೋಡ್ತೀನಿ ಅಂದ್ರು...."

"ಬಹಳ ಸಂತೋಷ—ಒಳಕ್ಕೆ ಬನ್ನಿ!" ಎನ್ನುತ್ತಾ ಹಿಂತಿರುಗಿದರು.

ಒಳಗೆ ಹೋದೆವು. ಮಸಕು ಬೆಳಕು. ಹಳೆಯ ಹಂಜರ. ಶಿವರಾಮಯ್ಯನವರು ಒಂದು ಈಚಲ ಚಾಪೆಯನ್ನು ಹಾಸಿದರು. ಅದೂ ಹಳೆಯದು. ಅಲ್ಲಲ್ಲಿ ಹರಿದುಹೋಗಿದ್ದಿತು.

"ಕೂತ್ಕೊಳ್ಳಿ. ಅಟ್ಟಪ್ಪ್ರೇಲಿದೆ. ತರ್ತೀನಿ...."

ನಾವು ಕುಳಿತುಕೊಂಡೆವು. ಐದು ನಿಮಿಷಗಳು ಕಳೆದುಹೋದುವು. ಆ ಮಸಕು ಬೆಳಕು ಕಣ್ಣುಗಳಿಗೆ ಅಭ್ಯಾಸವಾಗಿಹೋಯಿತು. ಶಿವರಾಮಯ್ಯನವರು ಮೆಲ್ಲನೆ ವೀಣೆಯನ್ನು ತಂದು ಮುಂದಿಟ್ಟರು.

ದೊಡ್ಡ ವೀಣೆ. ಯುಗಾಂತರಗಳ ಧೂಳಿನಿಂದ ಆಚ್ಛಾದಿತವಾಗಿತ್ತು. ಮೇಳವೆಲ್ಲಾ ಅಲ್ಲಲ್ಲಿ ಮುರಿದುಹೋಗಿತ್ತು....ಎರಡು ತಂತಿಗಳು ಮಾತ್ರ ಇದ್ದುವು.

ಒಂದು ಮೀಟನ್ನು ಹಾಕಿದೆ. ಕೊಂಚ ಒಡಕು ಶಬ್ದವು ಬಂದಿತು. ಆದರೆ ಆ ನಾದಗಾಂಭೀರ್ಯದಲ್ಲಿ ಅದು ಮುಚ್ಚಿಹೋಯಿತು. ಆ ನಾದದೊಂದಿಗೆ ಸಣ್ಣದೊಂದು ಧೂಳಿನ ಮೋಡವೆದ್ದಿತು.

"ಉಪಯೋಗಿಸಿ ಬಹಳ ದಿನ ಆದ್ಹಾಗಿದೆ...." ಎಂದೆ. ಅವರು ಗಂಟಲನ್ನು ಸರಿಮಾಡಿಕೊಳ್ಳುತ್ತಾ

"ನಮ್ಮಗೂ ಬಾರಸ್ತಾಯಿದ್ದ........ಆದ್ರೆ ಅವನು ಹದ್ನಾರ್ನೆ ವಯಸ್ನಲ್ಲೇ ಹೋಗ್ಬಿಟ್ಟ......ಇದ್ದಿದ್ರೆ...... ಇಪ್ಪತ್ತೈದೊರ್ಷ...."

ಯಾರೆಂದು ಕೇಳಬೇಕೆಂಬ ಆಶೆ. ಆದರೆ ವಸ್ತುವು

ಗತಾವಲೋಕನಕ್ಕೆ ಅಷ್ಟೊಂದು ಸರಿಯಾದುವಂತೆ ತೋರಲಿಲ್ಲ. ಆದುದರಿಂದ

"ಇದು ಬಹಳ ಹಳೆಯ ಕಾಲದ ಕೈವಾಡದಂತಿದೆ ಯಲ್ಲಾ.... ಎಂದೆ."

"ಹೌದು ಸ್ವಾಮಿ ನಮ್ಮ ಮುತ್ತಾತಂದ್ರು—ಸೂರಪ್ಪ ನೋರೂಂತ—ಮುಮ್ಮಡಿ ಕೃಷ್ಣರಾಜೇಂದ್ರ ಒಡೆಯರ ಆಸ್ಥಾನದಲ್ಲಿದ್ರು. ಅವರೇ ಇದಕ್ಕೆ ನೂರು ವರ್ಷ ಅಂತಾ ಇದ್ರಂತೆ—"

"ಓ ಹೊ ಹೊ ಸರಿ, ಇದು—ರಾಮಕೃಷ್ಣ—ಖರೀದಿ ವಿಚಾರ...." ಎಂದು ಅರ್ಧೋಕ್ತಿಯಲ್ಲಿ ನಿಲ್ಲಿಸಿದೆ. ಶಿವ ರಾಮಯ್ಯನವರು,

"ಸ್ವಾಮಿ-ಇಷ್ಟೊತ್ತಾಗಲೇ ನನ್ನ ವಿಚಾರವೆಲ್ಲ ನಿಮ್ಗೆ ರ್ಥವಾಗಿರಬೇಕು.... ಏನೋ ನಂಗೂ ಕಷ್ಟ ಕಾಲ ಹದಿನೈ ದ್ರೂಪಾಯಿ...." ಎಂದರು.

ವೀಣೆಯನ್ನು ಮನೆಗೆ ತೆಗೆದುಕೊಂಡು ಹೋಗಿ ಇಪ್ಪತ್ತೈದು ರೂಪಾಯಿಗಳನ್ನು ಕಳುಹಿಸಿ ಕೊಟ್ಟೆ.—ರೈಲ್ ಬಾಡಿಗೆಯನ್ನುಳಿದು ನನ್ನ ಬಳಿಯಲ್ಲಿದ್ದುದು ಅಷ್ಟೆ.

ಆ ದಿನ ರಾತ್ರಿ ವೀಣೆಯನ್ನು ಚೆನ್ನಾಗಿ ಒರೆಸಿ, ತಂತಿ ಗಳಿಗೆ ಕೊಂಚ ತುಪ್ಪವನ್ನು ಹಚ್ಚಿ ಆದಷ್ಟು ತುಕ್ಕನ್ನು ತೆಗೆದು, ರೇಖುಗಳನ್ನು ಸರಿಮಾಡಿದೆ. ನನ್ನ ಮಿತ್ರನು

"ಏನಾದ್ರೂ ಹಾಗನ್ನಯ್ಯ...." ಎಂದನು.

"ಷರೀ. ಮ್ಯಾಳಾ ಎಲ್ಲಾ ಉಜಾಡೆದ್ಹೋಗಿದೆ. ಒಂದೊಂದ್ತಂತಿ ಮೇಲೆ ರೆಟ್ಟೆಗಾತ್ರ ತುಕ್ಕು ಕೂತಿದೆ....

ಬೆಂಗಳೂರಿನಲ್ಲಿ ರಿಪೇರಿ ಮಾಡಸ್ತೀನಿ ಬಾ...."

"ಬಲೀ ದೊಡ್ಡಮನುಷ್ಯ ಕಾಣೋ. ನೀನ್ಹೀಗೆ ರಿಪೇರಿಮಾಡ್ಸಿ, ನಾನ್ಬೆಂಗಳೂರಿಗೆ ಬಂದು, ಆಹಾ–ಸುಮ್ನೆ ಹಾಗನ್ನೋಂದ್ರೆ...."

ಸ್ನೇಹಿತನ ಒತ್ತಾಯ. ಅಷ್ಟರಲ್ಲಿ ಬಾಗಿಲ ಬಳಿ ಕಾಲುಂಗುರದ ಶಬ್ದವಾಗಿ ನಿಂತಿತು. ದಂಪತಿ ಪೂಜೆಯು ಲಭಿಸಿತೆಂಬ ಸಮಾಧಾನದಿಂದ ವೀಣೆಯನ್ನು ಇಟ್ಕೊಂಡು, ಹಂಸಾನಂದಿಯ ಮನೆಗಳ ಮೇಲೆ ಬೆರಳುಗಳನ್ನು ಜಾರಿಸಿದೆ....

ಕಣಕಯ್ಯನ್ನು ಏನೋ ತರಚಿದಂತಾಯಿತು. ವೀಣೆಯನ್ನು ನನ್ನ ಕಡೆಗೆ ವಾಲಿಸಿಕೊಂಡು ನೋಡಿದೆ.

ದಂಡಿಯ ಮೇಲೆ, ಹೆಚ್ಚು ಕಡಿಮೆ ಮಧ್ಯದಲ್ಲಿ ಸುಮಾರು ಒಂದು ಅಂಗುಲದ ಕಚ್ಚೊಂದಿದ್ದಿತು. ರಾಮಕೃಷ್ಣನು—

"ಏನೋ ಪೆಟ್ಟುಬಿದ್ದಾಗಿದೇ ಕಣೋ...." ಎಂದನು. ಅದನ್ನೇ ದಿಟ್ಟಿಸಿ ನೋಡಿದೆ.

*　　*　　*　　*

ಮಂಜು ಮಂಜು.

ಆ ಮೇಲೆ ಬೆಳಕು. ಬೆಳಕು. ಸೌಮ್ಯವಾದ ಬೆಳಕು.

ಸೈಕತ ಸಮೂಹದ ಸ್ವಚ್ಛಂದ ಶಾಂತಿ—'ತೆಂಗುಗರಿ ಕೊಡೆಯಿರ್ಪ ಕಡಲುಲಿಯ ಮನೆ.' ತುತ್ತು ಕುಡಿಯ ತುದಿ....

ದಿನದ ಮುಂಬೆಳಕಿನೆದುರಾಗಿ ಮೂರು ಕಪ್ಪು ದೇಹಗಳು. ಶಾಂತವಾದ ಹಿಂದೂಸಾಗರದಲ್ಲಿ ಅವು ಮೆಲ್ಲನೆ

ಜಗ್ಗು ಹಾಕುತ್ತಿವೆ....ಹಡಗುಗಳು....

ಧ್ವಜಗಳು ಬಿಚ್ಚಿ ಹಾರುವಷ್ಟು ಗಾಳಿಯಿಲ್ಲ....ಹುಟ್ಟು ಗಳ ದೇಹಗಳಿಗೆ ಹಾಕಲ್ಪಟ್ಟಿರುವ ತಾಮ್ರದ ಕಟ್ಟುಪಟ್ಟಿ ಗಳು ಸಾಲು ಸಾಲಾಗಿ ಮಿನುಗುತ್ತಿವೆ.....

....ದೋಣಿಯೊಂದು ಹೆಚ್ಚು ಶಬ್ದವಿಲ್ಲದೆ ಹಡಗುಗಳ ಕಡೆಗೆ ಹೋಗುತ್ತಿದೆ.

* * * *

ಬೆಳಕು ಹೆಚ್ಚುತ್ತಿದೆ.

ಹಡಗಿನ ಮುಹಡಿಯಮೇಲೆ ನಾಲ್ವರು ನಿಂತಿದ್ದಾರೆ. ಅರುಣನ ಕಿರಣಗಳು ಅವರ ಬಲವಾದ ಮೈಕಟ್ಟು ಗಳನ್ನು ಬೆಳಗಲಾರಂಭಿಸಿವೆ.....

ನಾಲ್ವರಲ್ಲಿ ಮೂವರು ಕಪ್ಪು, ಒಬ್ಬನು ಕೆಂಪು. ತಮ್ಮ ರೇಷ್ಮೆಯ ಮೇಲ್ಹೊಸುಗಳನ್ನು ಆಗಾಗ ಸರಿಮಾಡಿ ಕೊಳ್ಳುತ್ತ ಮಾತನಾಡುತ್ತಿದ್ದಾರೆ....ನಯವಾದ ತಮಿ ಳನ್ನು ಹೋಲುವ ಭಾಷೆ. ಮಧ್ಯಮಧ್ಯೆ ಕೆಂಪು ಮುಖ ದವನು ಲ್ಯಾಟಿನ್ ಪದಗಳನ್ನು ಉಪಯೋಗಿಸುತ್ತಿದ್ದಾನೆ.

ಕಪ್ಪಗಿದ್ದ ಮೂವರಲ್ಲಿ ಅತ್ಯಂತ ಎತ್ತರವಾಗಿದ್ದವನು ಅವನೆದುರಿಗೆ ನಿಂತಿದ್ದ ಇನ್ನೊಬ್ಬನ ಎರಡು ಭುಜಗಳ ಮೇಲೂ ತನ್ನ ಎರಡು ಕೈಗಳನ್ನು ಇಡುತ್ತಾನೆ. ಆಗ ಅವನು ಧರಿಸಿರುವ ಭುಜಕೀರ್ತಿಗಳು ಹೊಳೆಯುತ್ತವೆ. ಅತ್ಯಂತ ಸ್ನೇಹದಿಂದ, ಹುಸಿನಗೆಯಿಂದ—

"ಬೆಳಕು ಏರುತ್ತಿದೆ. ನಾನು ಹೊರಡುತ್ತೇನೆ. ಎಚ್ಚರಿಕೆಯಿಂದಿರಬೇಕು. ನೆಡುಂಜಲಿಯನ್.....ತಿರು ವಳ್ಳುವಾರು...." ಎನ್ನುತ್ತಾನೆ. ನಡುವೆ ಕೆಂಪು ಮುಖದ

ವನು ಬಾಯಿಹಾಕುತ್ತಾನೆ—

"ತಿರುವಲ್ಲುವಾರ್........ತೆರಿಯಾದೆ" ನಾಟಕವನ್ನು ಭಾಷಾಂತರಿಸಿ ಓದಿದಾಗ ರೋಮಿನ ರಸಿಕರು ತಲೆ ದೂಗಿದಹಾಗೆ, ಮುದಿಸೆನೇಟರುಗಳು ಬಾಯಿಬಿಟ್ಟ ಹಾಗೆ....ನೀವು ಅಲ್ಲಿರಬೇಕಾಗಿತ್ತು ರಾಜರೆ"...........

ರಾಜನು ಅರೆನಗೆಯಿಂದ

"ಈಸಲ ಮುದಿಸೆನೇಟರುಗಳೆಲ್ಲಾದರೂ ಹೋಗಲಿ... ನಿಮ್ಮ ಯುವತಿಯರು...." ಎಂದು ಅರ್ಧೋಕ್ತಿಯಲ್ಲಿ ನಿಲ್ಲಿಸುತ್ತಾನೆ. ನೆಡುಂಜಲಿಯನ್ನನು ತಲೆವಾಗಿ

"ಪರವಾಇಲ್ಲ. ಕ್ವಿಂಟಸ್ ನೋಡಿಕೊಳ್ಳುತ್ತಾರೆ" ಎಂದು ಕೆಂಪುಮುಖದವನ ಕಡೆಗೆ ಕೈತೋರಿಸುತ್ತಾನೆ. ಅವನು ಮೆಲ್ಲನೆ

"ಹ ಹ್ಹ! ಹ್ಹ!...." ಎಂದು ನಗುತ್ತಾನೆ. ಉಳಿದ ಮೂವರೂ ಅವನ ನಗೆಯನ್ನು ಪ್ರತಿಬಿಂಬಿಸುತ್ತಾರೆ...

ಕೊಂಚಹೊತ್ತು ಕಳೆದುಹೋಗುತ್ತದೆ.

ಆಮೇಲೆ ರಾಜನು—

"ಸರಿ. ನಾನು ಹೊರಡುತ್ತೇನೆ. ಕ್ವಿಂಟಸ್ ನಿಮ್ಮ ಜವಾಬ್ದಾರಿಯು ದೊಡ್ಡದು. ನನ್ನ ಸಾಮ್ರಾಜ್ಯದಲ್ಲಿನ ಅತ್ಯಮೂಲ್ಯವಸ್ತುಗಳಲ್ಲಿ...." ಎನ್ನುತ್ತಾನೆ. ಕ್ವಿಂಟಸ್‌ನು ತಲೆಬಾಗುತ್ತಾನೆ....

ಸೂರ್ಯನು ಹುಟ್ಟಿದನು. ಶಾಂತವಾದ ಹಿಂದೂ ಸಾಗರವು ವಿಸ್ತಾರವಾದೊಂದು ಚಿನ್ನದ ತಗಡಿನಂತೆ ಕಾಣುತ್ತಲಿದೆ—

....ಪಶ್ಚಿಮ ದಿಗಂತದ ದೂರದಲ್ಲಿ ಮೂರು ಚುಕ್ಕೆ

ಗಳು ಕಾಣುತ್ತಲಿವೆ. ನಿಧಾನವಾಗಿ

"ಸ್ಲಷ್—ಸ್ಲಷ್—ಸ್ಲಷ್...." ಎಂದು, ಆ ಎಳೆಯ ಬೆಳಗಿನ ನೀರವತೆಯಲ್ಲಿ ಕೇಳಿಸುತ್ತಿದೆ.

* * * *

ಇದೇನು—?

....ರೋಮಿನ....ವೈಭವ!

ಚಕ್ರಾಕಾರವಾಗಿ, ಸಾಲಿನಮೇಲೆ ಸಾಲಾಗಿ ಅಮೃತ ಶಿಲಾಸನಗಳು. ಅವುಗಳಲ್ಲಿ ಕಿಕ್ಕಿರಿಯುವಂತೆ ರೋಮನ್ನರು ಕುಳಿತಿದ್ದಾರೆ. ಅವರ ನಿಲುವಂಗಿಗಳನ್ನು ಭುಜಗಳ ಬಳಿ ಕಟ್ಟಿರುವ ಜರತಾರೀ ದಾರದ ಗಂಟುಗಳು, ಬೆಳ್ಳಿಯ ಸರಪಳಿಗಳಿಂದ ಲಂಬಿತವಾದ, ಬೆಳ್ಳಿಯ ಕಂದೀಲುಗಳ ಬೆಳಕಿನಲ್ಲಿ ನಾಲುಸಾಲಾಗಿ ಮಿನುಗುತ್ತಿವೆ.

ಮಧ್ಯದಲ್ಲಿ ರಂಗಭೂಮಿ. ಅದರ ಎಡಗಡೆ ಎರಡು ಶಿಲಾಸನಗಳು. ಒಂದರಲ್ಲಿ ತೇಜಸ್ವಿಯಾದೊಬ್ಬನು, ತನ್ನ ಎರಡು ಮುಷ್ಟಿಗಳನ್ನೂ ಜೋಡಿಸಿ, ಅದರ ಮೇಲೆ ಗಲ್ಲವನ್ನಿಟ್ಟು ಮೊಳಕೈಗಳ ಮೇಲೆ ಭಾರವನ್ನು ಬಿಟ್ಟು ಕುಳಿತಿದ್ದಾನೆ...."

ಸೇನಾನಿಯ ಗತ್ತು ಇದೆ. ಕಲಾಭಿಮಾನಿಯ ಗಮ್ಮತ್ತೂ ಇದೆ.—ಮಾರ್ಸೆಲಸ್....

ರಂಗಭೂಮಿಯ ಮೇಲೆ ನಿಂತು ರೋಮಿನ ಸಂಗೀತ ವಿಶಾರದನು ಸಾರಂಗಿಯನ್ನು ನುಡಿಸುತ್ತ, ಜೊತೆಗೆ ಹಾಡುತ್ತಲಿದ್ದಾನೆ....ಆರ್ಫಿಯಸ್ಸಿನ ಸಾರಂಗವಾದನಕ್ಕೆ ಮೋಹಗೊಂಡು ಗಿಡಮರಗಳು ಅವನನ್ನು ಹಿಂಬಾಲಿಸಿದುವೇ ಆ ಹಾಡಿನ ವಸ್ತು....

....ಪಕ್ಕದಲ್ಲಿ ನೆಡುಂಜಲಿಯಮ್ಮನು ಕುಳಿತಿದ್ದಾನೆ. ಅವನೆದುರಿಗೆ ಕರಿಯ ದೊಡ್ಡದೊಂದು ವೀಣೆಯು ಕುಳಿತಿದೆ—ಅದರ ಕಂಚಿನ ಮೆಟ್ಟಲುಗಳೂ, ರೇಖು ಗಳೂ, ತಂತಿಗಳೂ ತಳತಳಿಸುತ್ತಿವೆ. ನೆಡುಂಜಲಿಯ ಮ್ಮನ ಮುಖದ ಗಾಂಭೀರ್ಯವು ಅದರಲ್ಲಿ ಪ್ರತಿಬಿಂಬಿ ತವಾಗಿವೆ. ಅದೂ ಅವನಂತೆ ಆ ಹಾಡನ್ನು ಆಲಿಸುತ್ತಿ ದೆಯೊ....

ಸಾರಂಗಿಯ ನಾದವು, ಇನ್ನೇನು ಸಭೆಯ ನೀರವತೆ ಯಲ್ಲಿ ತಲ್ಲೀನವಾಗಬೇಕು.......ಅಷ್ಟರಲ್ಲಿ ವೀಣೆಯು ಮಾರ್ದನಿಗೊಟ್ಟಿತು.

ಅದೇ ಹಾಡು. ಅದೇ ರೀತಿ. ಆದರೆ....ಆ ಕೈ ಚಳಕ....

ಸಭೆಯಲ್ಲನೇಕರು ಮೈಮರೆತು ಆರ್ಫಿಯಸ್ ಎಂದು ಕೂಗಿಕೊಂಡರು.

ಹಾಡು ಮುಗಿಯಿತು. ಆದರೆ ಸಭೆಗೆ ಚಪ್ಪಾಳೆ ಹೊಡೆಯಲು ಸಹ ಜ್ಞಾನವಿರಲಿಲ್ಲ.

....ಮೊದಲು ಮಾರ್ಸಲಪ್ಪನೇ ಕರತಾಡನ ಮಾಡಿ ದನು.

ಪುನಃ ನಿಶ್ಶಬ್ದ.

ನಿರಾಯಾಸವಾಗಿ, ನಯವಾಗಿ, ಆಲಾಪವು ಉದ್ಭವಿ ಸಿತು. ಬರಬರುತ್ತ ರಾಗದ ಜರುಬು ಏರುತ್ತಾ ಬಂದಿತು. ಆ ತೀವಿಯ ಔನ್ನತ್ಯದಲ್ಲಿ, ಅದು ತಾನ ವರ್ಣವಾಗಿ ಪರಿಣಮಿಸಿತು....

" ತಾಂ-ತಂ-ತತಂ-ತತಂ-" ಎಂದು ಹೊರಟ ಪ್ರಸ್ತಾ

ರವು ಕೇಳಿಗರ ಮೈಜುಂ ಎನ್ನುವಂತೆ ಮಿಡಿಯುತ್ತಿದೆ. ಮುಷ್ಟಿಗಳು ಬಿಗಿಯಾಗುತ್ತಿವೆ....

*　　　　*　　　　*　　　　*

ಸಾಯಂಕಾಲ. ಏಳು ಘಂಟೆಗಳಾಗಿರಬಹುದು.

ನೆಡುಂಜಲಿಯನ್ನನ ಬಿಡಾರದಲ್ಲಿ ಒಂದು ಸಣ್ಣ ದೀಪವು ಉರಿಯುತ್ತಿದೆ. ಕ್ವಿಂಟಸ್ಸನೂ, ನೆಡುಂಜಲಿಯನ್ನನೂ ಮಾತನಾಡುತ್ತಿದ್ದಾರೆ.

"ನಿಮ್ಮನ್ನು ಬಿಡಲು ನಮ್ಮವರಿಗೆ ಇಷ್ಟವೇ ಇಲ್ಲವಲ್ಲ...."

"ಸರಿ. ಆಗಲೇ ತಿಂಗಳಾಗುತ್ತ ಬಂದಿತು....ಅದಿರಲಿ ನಾಳೆ-ಯಾರು ಬರುವವರು?—ಆಸ್ಥಾನಕ್ಕೆ...."

"ಹ್ಯಾನಿಬಾಲ್. ಅವರು ಕಾರ್ಥೇಜಿನ ವೀರರು. ಮಾರ್ಸೆಲಸ್ಸರು ಅವರನ್ನು ನಾಲ್ಕು ಸಲ ಹೇಳಿ ಹೇಳಿ ಸೋಲಿಸಿದ್ದಾರೆ....ಕಾರ್ಥೇಜು ರೋಮುಗಳು ಅನವರತ ಶತ್ರುಗಳು....ಆದರೆ ಅವರವರಿಗೆ ಅದೇನೋ ಗೌರವ ಪ್ರೇಮಗಳು....ನಾವೆಲ್ಲರೂ ಅವರನ್ನು ಬಹಳ ಗೌರವಿಸುತ್ತೇವೆ...."

"ಆಹಾ! ಅಲ್ಲವೆ. ಸಿಂಹದೊಂದಿಗೆ ಸೃಗಾಲವು ವೈರವನ್ನು ಕಟ್ಟಿಕೊಂಡೀತೆ....ಹಾಗಾದರೆ ನನ್ನ ಸಂಗೀತ ಕ್ಕೋಸ್ಕರವೆ....ಅವರನ್ನು ಕರೆಯಿಸಿರುವುದು...."

"ಅನುಮಾನವೇಕೆ ನಿಮ್ಮ ವೀಣಾವಾದನ ವಿಚಾರವಾಗಿ ನಾನು ಬೇರೆ ಹೇಳಬೇಕೆ...."

ಕ್ವಿಂಟಸ್ಸನು ಹೊರಟು ಹೋದನು.

*　　　　*　　　　*　　　　*

ಅಂದು ಮಾರ್ಸೆಲಸ್ಸಿನ ಪಕ್ಕದಲ್ಲಿದ್ದ ಶಿಲಾಸನವು ಬರಿದಾಗಿದ್ದಿತು. ಇಂದು ಅದರಲ್ಲಿ ಹ್ಯಾನಿಬಾಲನು ಕುಳಿತಿದ್ದಾನೆ.....

ಮೈಕಟ್ಟಿನಲ್ಲಿ ಮಾರ್ಸೆಲಸ್ಸಿಗಿಂತಲೂ ದೊಡ್ಡಾಳು. ಮುಖ ಕೊಂಚ ಕಪ್ಪು ಮಿಶ್ರವಾದ ಕೆಂಪು. ಆವರೆ ಅದರ ಮಹಾಸಾಗರದ ಗಾಂಭೀರ್ಯ, ಆ ಕಣ್ಣುಗಳು, ಅವನ ರೇಷ್ಮೆಯ ಪೋಷಾಕಿನ ಒಳಗಡೆ ಹೊಳೆಯುತ್ತಿರುವ ಉಕ್ಕಿನ ಕವಚದಂತೆ ಹೊಳೆಯುತ್ತಿವೆ.

ಇಂದಿನ ಗಾನವು, ಸಂಗೀತಶಾಸ್ತ್ರವನ್ನು ತೊಡೆತಟ್ಟಿ ಕುಸ್ತಿಗೆ ಕರೆಯುವ ಗಾನ. ರಾಗ ಒಂದೇ. ವಿವಿಧ ಭಾವಗಳ ಪ್ರಕಾಶನ....ಪ್ರವಾಹ ಒಂದೇ—ಹೃದಯಸಾಗರವು ವಿವಿಧವಾಗಿ ಉಕ್ಕುತ್ತಿದೆ....

ಮೋಹನವು ನುಡಿಯುತ್ತಿದೆ.

ಶೃಂಗಾರಸ ರತಿಯಂತೆ, ವೀರರಸ ಕಾಳಿಯಂತೆ.... ಮೋಹನದ ಅಧಿದೇವತೆಯು ನಾಟ್ಯವಾಡುತ್ತಿದ್ದಾಳೆ.... ಹಾಗೆಯೇ ಆಕೆಯು ಶೋಕಭಾವವನ್ನು ಬೀರಲಾರಂಭಿಸಿದಳು....

....ಹ್ಯಾನಿಬಾಲನು ಹಾಗೆಯೇ ಕಣ್ಣನ್ನೊರಸಿಕೊಂಡನು.

ಇದ್ದಕ್ಕಿದ್ದ ಹಾಗೆಯೇ ವೈಣಿಕನು ಮನೋವೇಗದಿಂದ ಮೇಲಕ್ಕೆದ್ದು, ವೀಣೆಯನ್ನು ಅನಾಮತ್ತಾಗಿ ಎತ್ತಿ, ಹ್ಯಾನಿಬಾಲಕನ ಹಣೆಗೆ ಅಡ್ಡವಾಗಿ ಹಿಡಿದನು....

"ಖಟ್."

ಆಗ, ಸಭೆಗೆ ಎಚ್ಚರವಾಯಿತು. ವೈಣಿಕನು ಮೇಲ

ಕ್ಕೆದ್ದುದು; ವೀಣೆಯನ್ನು ಹ್ಯಾನಿಬಾಲನ ಹಣೆಗಸ್ತವಾಗಿ ಹಿಡಿದುದು; ಅದೊಂದೂ ಯಾರಿಗೂ ಕಾಣಿಸಲಿಲ್ಲ— ವೀಣೆಯ ದಂಡಿಯಲ್ಲಿ ಹೊಳೆಯುತ್ತ ಕೊಂಚ ನಾಟಿಕ್ಕೊಂಡಿದ್ದ ಚೂರಿಯೊಂದು ಕಾಣಿಸಿತು....

ಕೋಪದಿಂದ ಸಭೆಯು ಚೆಲ್ಲಾಪಿಲ್ಲಿಯಾಯಿತು.

* * * *

ಮಾರ್ಸೆಲಸ್ಸಿನ ಏಕಾಂತ ಗೃಹ. ಹ್ಯಾನಿಬಾಲನೂ, ಮಾರ್ಸೆಲಸ್ಸನೂ, ನೆಡುಂಜಲಿಯನ್ನನೂ ಕ್ವಿಂಟಸ್ಸನೂ ಮಾತನಾಡುತ್ತಿದ್ದಾರೆ—ಹ್ಯಾನಿಬಾಲನು ಕೊಂಚ ತಡವರಿಸುತ್ತ ಮಾತನಾಡುತ್ತಾನೆ:

"ನೀವು ಯೋಚನೆ ಮಾಡಬೇಡಿ ಮಾರ್ಸೆಲಸ್—ನೀವು ನಿಷ್ಕಲ್ಮಷ ಸ್ನೇಹಿಗಳು ಎಂಬುದನ್ನು ಚೆನ್ನಾಗಿ ಬಲ್ಲೆ...."

"ನನಗೇ—ಅವಮಾನ—ರೋಮಿನಲ್ಲಿ ಇಂಥ ಸೃಗಾಲಗಳಿವೆಯೆಂದರೆ...." ಕ್ವಿಂಟಸ್‌ನು ನಡುವೆ ಬಾಯಿ ಹಾಕುತ್ತಾನೆ—

"ನನಗೆ ಮನಸ್ಸಿನಲ್ಲೇನೋ ಶಂಕೆಯಿದ್ದಿತು. ಆದರೆ ಹೀಗಾಗುವುದೆಂದುಕೊಂಡಿರಲಿಲ್ಲ. ನೆಡುಂಜಲಿಯನ್ನರಿಂದ...." ನೆಡುಂಜಲಿಯನ್ನನು ನಸುನಕ್ಕು—

"ನನ್ನದೇನೂ ಇಲ್ಲ....ಇದೆಲ್ಲಾ ಆ ವೀಣೆಯ ಅಧಿದೇವತೆಯ ಅನುಗ್ರಹ...." ಎಂದನು. ಆಗ ಹ್ಯಾನಿಬಾಲನು ನೆಡುಂಜಲಿಯನ್ನನ ಕಡೆಗೆ ತಿರುಗಿದನು.

"ನೀವು ಮಾಡಿದ ಕೆಲಸವು ಅದ್ಭುತವಾದುದು.... ಕಲಾ ಸಾಮಗ್ರಿಯನ್ನು, ರಣಸಾಮಗ್ರಿಯನ್ನಾಗಿ ಎಷ್ಟು

ಬೇಗ ತಿರುಗಿಸಿದಿರಿ....ಅದರೆ ನಿಮ್ಮ ಗಾನದ ಆನಂದದಲ್ಲಿ ನನ್ನ ಪ್ರಾಣವು ಹೋಗಿದ್ದಿದ್ದರೂ ಹೆಚ್ಚು ನಷ್ಟವೇನೂ ಆಗುತ್ತಿರಲಿಲ್ಲ.... ;"

"ಭಾರತದಲ್ಲಿ, ಕಲೆಯ ಅಧಿದೇವತೆಯರೆಲ್ಲ ಪ್ರಳಯ ರುದ್ರನ ಪತ್ನಿಯರು. ಅವರು ಸುಂದರಿಯರೂ ಹೌದು, ರಣಾಜ್ಞೆಯರೂ ಹೌದು....ಅಲ್ಲವೆ?...."

ಹ್ಯಾನಿಬಾಲನು ನಗುತ್ತ, ನೆಡುಂಜಲಿಯನ್ನನ ಭುಜಗಳ ಮೇಲೆ ಕೈಗಳನ್ನು ಇಟ್ಟು ಅಲುಗಿಸಿ—

"ನಿಮ್ಮನ್ನೂ ನಿಮ್ಮ ವೀಣೆಯನ್ನೂ ನೆನೆಸಿಕೊಂಡರೆ-ರೋಮಿನೊಡನೆ ಕಾದಾಡುವುದನ್ನು ಸದ್ಯಕ್ಕೆ ನಿಲ್ಲಿಸಿ ನಿಮ್ಮ ಭೂಪತಿಗಳನ್ನು ಗೆದ್ದು, ನಿಮ್ಮನ್ನೂ ನಿಮ್ಮ ವೀಣೆಯನ್ನೂ ಗೆಲುವಿನ ಗುರುತಾಗಿ ನಮ್ಮ ದೇಶಕ್ಕೊಯ್ಯಬೇಕೆನ್ನಿಸುತ್ತದೆ"........ಎಂದನು.

"ಆಗಬಹುದು. ನಮ್ಮವರ ಶಿರಸ್ತ್ರಾಣಗಳ ತ್ರಾಣವನ್ನು ಪರೀಕ್ಷಿಸಬಹುದು...."

"ಅಷ್ಟು ಬಲವೊ....?"

"ನನ್ನ ವೀಣೆಯ ಮರವನ್ನು ನೋಡಿದಿರಲ್ಲ...."

ಎಲ್ಲರೂ ನಗಲಾರಂಭಿಸಿದರು. ಮಾರ್ಸೆಲಸ್ಸನು ಮಧ್ಯೆ ಬಂದು,

"ಮೊದಲು ನನ್ನನ್ನು ಗೆದ್ದರಲ್ಲವೆ....? ಕಾರ್ಥೇಜಿನ ವೀರರೆ! ಎಂದನು.

"ಹಾಗೆಯೇ ಆಗಲಿ. ಮುಂದಿನ ಕದನದಲ್ಲಿ.... ಎಂದು ಹ್ಯಾನಿಬಾಲನು ನಕ್ಕನು. ಎಲ್ಲರೂ ನಗಲಾರಂಭಿಸಿದರು.

........ಆ ನಗುವಿನಿಂದ ಆ ರಾತ್ರಿಯು ತುಂಬಿಹೋಯಿತು.

*    *    *    *

ಹಡಗು ಮೆಡಿಟರೇನಿಯನ್ ಸಮುದ್ರದಲ್ಲಿದೆ. ಅದರ ಪಕ್ಕಗಳಿಂದ ಹೊರಟಿರುವ ಹುಟ್ಟುಗಳ ಸಾಲುಗಳು, ವೇಗವಾಗಿ ನೀರನ್ನು ಬಗೆಯುತ್ತಿವೆ....ಹಡಗಿನ ಕಟಕಟೆಯ ಮೇಲೆ ಮೊಳಕೈಗಳನ್ನೂರಿಕೊಂಡು ನೆಡುಂಜಲಿಯನ್ನನು ಪಶ್ಚಿಮ ದಿಗಂತವನ್ನೇ ನೋಡುತ್ತಿದ್ದಾನೆ.

"ಸ್ಲಷ್—ಸ್ಲಷ್—ಸ್ಲಷ್...."

*    *    *    *

ಎಲ್ಲವೂ ಒಮ್ಮೆಯೇ ಮಂಜಾಗಿ ಹೋಯಿತು........ ಚಳಿಚಳಿಯಾಯಿತು....

ರಾಮಕೃಷ್ಣನು ಹಣೆಗೆ ತಣ್ಣೀರಿನ ಬಟ್ಟೆಯನ್ನು ಕಟ್ಟುತ್ತಲಿದ್ದ. ನಾನು ಎಚ್ಚರಗೊಂಡಿದ್ದನ್ನು ನೋಡಿ

"ಒಳ್ಳೇ ಆಸಾಮಿ ಕಾಣಯ್ಯ....ಇಷ್ಟೊತ್ತೂ ಎಲ್ಲೋಗಿದ್ದೆಯ್ಯ....ಹುಶ್...." ಎಂದನು. ಬಾಗಿಲ ಬಳಿ ಕಾಲುಂಗುರದ ಸದ್ದಾಯಿತು. ಮಿಸೆಸ್ ರಾಮಕೃಷ್ಣಯ್ಯನವರು,

'ಸದ್ಯ!' ಎಂದುಕೊಂಡು ಹೊರಟರು....

ಮಾರನೆಯ ದಿನ ವೀಣೆಯೊಂದಿಗೆ ಬೆಂಗಳೂರಿಗೆ ಬಂದೆ.

೨

ಭ್ರಮೆಯು ಮುಗಿಯಿತು. ಏಕೆ ಹೀಗಾಯಿತೆಂದು ತಿಳಿಯಲು ಪ್ರಯತ್ನಿಸಿದೆ. ಅನೇಕರು, ತಿಳಿದವರು ಅನೇಕವಾಗಿ

ಹೇಳಿದರು. ಕೆಲವರು– 'ವೀಣೆಯು ಭೂತಪ್ರೇತಗಳ ವಾಸಸ್ಥಾನವಂತಿದೆ. ಸುಟ್ಟುಬಿಡಿ' ಎಂದರು– ಅದು ಹೋಗಲಿ. ನನಗೆ ತೋರುವುದು ಹೀಗೆ:—

"ಅಚೇತನ ವಸ್ತುಗಳಿಗೂ ಒಂದು ಅಪೂರ್ವ ಶಕ್ತಿಯುಂಟು: ಎಂದಾದರೂ ಸರಿ, ತಾವು 'ಅನುಭವಿಸಿದ' ದೃಶ್ಯಗಳನ್ನು ಮನುಷ್ಯನ ಮನೋಪ್ರಪಂಚಕ್ಕೆ ಎಸೆಯಬಲ್ಲವು"–ಇದಕ್ಕೆ ಅನೇಕ ನಿದರ್ಶನಗಳಿವೆ.

ಪ್ಯಾರಿಸ್ಸಿನಲ್ಲಿ ಒಂದು ಹೋಟೆಲು. ಕೊಠಡಿಯೊಂದರಲ್ಲಿ ಪ್ರಯಾಣಿಕನೊಬ್ಬನು ಇಳಿದುಕೊಂಡಿದ್ದು, ರಾತ್ರಿಯಲ್ಲಿ ಏನನ್ನೊ ಓದುತ್ತ ಕುಳಿತಿದ್ದನು. ಇದ್ದಕ್ಕಿದ್ದ ಹಾಗೆಯೇ ಗೋಡೆಯ ಕೆಳಗಿನಿಂದ ರಕ್ತ ಪ್ರವಾಹವು ಹರಿದಂತಾಗಿ, ಅವನು ಜ್ಞಾನತಪ್ಪಿ ಬಿದ್ದುಬಿಟ್ಟನು. ಆ ಕೊಠಡಿಯು, ಹಿಂದೆ, ಹೂಗ್ನೆನಾಟರ ಕೊಲೆಯ ರಂಗದಲ್ಲಿ ಪ್ರಮುಖಸ್ಥಾನವನ್ನು ವಹಿಸಿದ್ದಿತಂತೆ

ಇನ್ನೊಮ್ಮೆ ನನ್ನ ಮಿತ್ರರೊಬ್ಬರು, ಶ್ರೀರಂಗಪಟ್ಟಣದಲ್ಲಿರುವ, ಟಿಪ್ಪೂವಿನ ಕಾಲದ ಬಂದೀಖಾನೆಗಳಲ್ಲಿ ಓಡಾಡುತ್ತಿದ್ದರು. ಇದ್ದಕ್ಕಿದ್ದ ಹಾಗೆಯೆ ಕೃಶನಾದ, ಹರಕು ಬಟ್ಟೆಗಳನ್ನು ಧರಿಸಿದ ಕೆಂಪು ಮುಖದವನೊಬ್ಬನು ಎದುರಾದನು. ಮಾಯವೂ ಆದನು. ನನ್ನ ಮಿತ್ರನು ಗಾಬರಿಪಡಲಿಲ್ಲ. ಅಲ್ಲಿ ಜನರಲ್ ಬೇರ್ಡ್ ಬಂದಿಯಾಗಿದ್ದನಂತೆ.

ಅಂತೂ ದೃಶ್ಯಗಳನ್ನು 'ಎರಚಬಲ್ಲ'ವು ಎಂಬುದೇನೋ ಖಂಡಿತವಾದಂತಿದೆ. ಆದರೆ ದೃಶ್ಯದ ಸ್ಥಿರತೆ, ಸ್ಫುಟತ್ವ, ಪರಸ್ಪರ ಸಂಬಂಧ—ಇವುಗಳೆಲ್ಲವೂ ಆಯಾ ಮನುಷ್ಯನ ಮನೋಸ್ಥಿತಿ, ಸಂಸ್ಕೃತಿ, ಜಾಗೃತಿ ಮುಂತಾದವುಗಳನ್ನು ಅವಲಂಬಿಸುತ್ತವೆಂದು ನನ್ನ ಭಾವನೆ.

ಪ್ರಕೃತದಲ್ಲಿ—ವೀಣೆಯು ದಂಡಿಯ ಮೇಲಿದ್ದ ಗುರುತು ನನ್ನ ಮನಸ್ಸಿನ ಮೇಲೆ ತೀವ್ರವಾದ ಪರಿಣಾಮವನ್ನುಂಟುಮಾಡಿ, ನನ್ನ

ಮುಸಃಚಕ್ಷುಸ್ಸಿಗೆ ಕ್ರಿ.ಪೂ. ೨-೩ ಶತಮಾನಗಳಲ್ಲಿ ನಡೆದ ಪ್ರಸಂಗ ವೊಂದನ್ನು ಚಿತ್ರಿಸಿರಬೇಕು.—ಚರಿತ್ರೆಯ ದೃಷ್ಟಿಯಿಂದ ಅನೇಕ ನ್ಯೂನಾತಿರೇಕಗಳು ಕಾಣಬರಬಹುದು. ಆದರೆ ಬಲ್ಲವರಾರು-?

ಇನ್ನೊಂದು ವಿಷಯ. ನನಗೆ ಬರುವ ಲ್ಯಾಟಿನ್ ಎಲ್ಲಾ ಇಷ್ಟರಲ್ಲಿದೆ.—

'Nonquam minus solus, quam Cum solus.' ಮತ್ತು ಹೈಸ್ಕೂಲಿನಲ್ಲಿ ಕಲಿತ 'Quod Erar Demonstrandum.' ಆದರೂ ಆ ಭಾಷೆಯನ್ನೂ ಹೇಗೆ ಅರ್ಥ ಮಾಡಿಕೊಂಡೆನೋ ತಿಳಿಯದು. ತಿಳಿಯುವ ಸಂಭವವೂ ಇಲ್ಲ.



# ಸಾಧನೆ



Each talent, each achievement, and each gain
Necessitates some penalty to pay.
Delight imposes lassitude and pain,
As certainly as the darkness follows the day.

—E. W. W.

೧

ಹಾಲುಗಲ್ಲಿನಲ್ಲಿ ಕಡೆದ ವಿಗ್ರಹ. ಇನ್ನೂ ಅಪೂರ್ಣ ವಾಗಿದ್ದುದರಿಂದ ಮುಖಭಾಗವೆಲ್ಲ ಅಸ್ಫುಟವಾಗಿತ್ತು. ಕಿರೀಟ ಮಂಡಿತವಾದ ತಲೆ; ಕೊಂಕಿ ಕೆಳಗಿಳಿದಿರುವ ಸೊಂಡಿಲು; ಅಷ್ಟಭುಜಗಳು:—ಒಂದೊಂದು ಕೈಯ ಲ್ಲಿಯೂ ಖಡ್ಗ ತ್ರಿಶೂಲ ಡಮರುಗ ಕುಂತಾದಿ ಆಯುಧ ವಿಶೇಷಗಳು; ಆ ಆಕಾರಕ್ಕೆ ತಕ್ಕ ಉದರದ ಗಾತ್ರ; ಅದನ್ನು ಮೂರು ಸುತ್ತು ಬಳಸಿ ಹಿಂದೆ ಹಾದು ತಲೆಯ ಮೇಲೆ ತನ್ನ ಸಪ್ತ ಮುಖಗಳನ್ನು ಗಂಭೀರವಾಗಿ ವಿಸ್ತ ರಿಸಿ ನಿಂತಿರುವ ಮಹಾಸರ್ಪ; ಕೆಳಗೆ ಸೂಕ್ಷ್ಮ ರೇಖೆಗ ಳಿಂದ ಕೂಡಿರುವ ಕಲಾಮಯವಾದ ವಿಚಿತ್ರತರ ಪೀಠ; ಪೀಠಕ್ಕೆ ಹೊಂದಿಕೊಂಡು, ಭಯ ಭಕ್ತಿಗಳಿಂದ, ಸ್ವಾಮಿ ಯನ್ನು ಹೊತ್ತಿರುವ ಮೂಷಕ; ಉಭಯ ಪಾರ್ಶ್ವಗಳ ಲ್ಲಿಯೂ ಅತಿ ಸೂಕ್ಷ್ಮಶರೀರಿಗಳಾಗಿ ಚಾಮರವ್ಯಜನಾದಿ ಗಳಿಂದ ಪ್ರಭುವನ್ನು ಓಲಯಿಸುತ್ತ ಸ್ವಲ್ಪ ಬಗ್ಗಿ ನಿಂತಿ ರುವ ಗಂಧರ್ವ ದಂಪತಿಗಳು;—ಪದ್ಮಾಸನಾಸೀನ ಬೃಹ ದ್ರೂಪಿ ಗಣಪತಿ; ಮುಕ್ಕಾಲು ಮುಗಿದಿರುವ ವಿಗ್ರಹ; ಅಸಮಾನ್ಯ ಕೃತಿ.

ನೋಡುತ್ತ ನಿಂತಿರುವಂತೆ ಶಿಲ್ಪಿಯ ಮುಖದ ಮೇಲೆ ಒಂದು ನಗು ಸುಳಿಯಿತು. ಅವನ ಕೃತಿ ಅದು. ಮುಗಿ ಯುವುದಕ್ಕೆ ಬಹಳ ಕಾಲ ಬೇಕಾಗಿರಲಿಲ್ಲ. ಹೆಚ್ಚೆಂದರೆ ನಾಲ್ಕೈದು ದಿವಸಗಳು. ಆಮೇಲೆ? ನೆನಪಿನಿಂದ ಅವನ

ಮೈ ರೋಮಾಂಚಿತವಾಯಿತು. ಆಮೇಲೆ ತನ್ನ ಕೃತಿ ಪೂರ್ಣವಾಗುವುದು. ತನ್ನ ಆಶೆ ನೆರವೇರುವುದು. ತನ್ನ ಬಹುದಿನದ ತಪಸ್ಸು ಸಿದ್ಧಿಸುವುದು. ಆ ಸಿದ್ಧಿ! ಅವನ ಮನಸ್ಸಿನಲ್ಲಿ 'ಸಿದ್ಧಿ' ಎಂಬ ಮಾತು ಸುಳಿಸುಳಿಯಾಗಿ ದನಿಕೊಟ್ಟಿತು. ಅವನ ಕಣ್ಣಿನಲ್ಲಿ ತೃಪ್ತಿ ತುಳುಕುತ್ತಿತ್ತು. ಮೈವೆತ್ತು ನಿಂತಿರುವ ತನ್ನ ಕಲೆಯನ್ನು ಆಶಾಪೂರಿತ ನೇತ್ರಗಳಿಂದ ಸವಿಯುತ್ತ ತದೇಕಧ್ಯಾನಚಿತ್ತನಾದನು.

* * * *

ಆತನು ಕಲೋಪಾಸಕ, ಆಜನ್ಮಬ್ರಹ್ಮಚಾರಿ. ವಯಸ್ಸು ನಲವತ್ತರ ಹತ್ತಿರಕ್ಕೆ ಬಂದಿತ್ತು. ಕಪ್ಪಾದ ಸದೃಢವಾದ ದೇಹ; ತಲೆಯಲ್ಲಿ ದೀಕ್ಷಾಬದ್ಧವಾದ ಕೇಶರಾಶಿ; ಅಗಲವಾದ ಹಣೆಯಲ್ಲಿ ಕುಂಕುಮದ ದೊಡ್ಡ ಅಡ್ಡಪಟ್ಟಿ; ಯಾವ ಭಾವವನ್ನೂ ವ್ಯಕ್ತಗೊಳಿಸದಿರುವ ಕೆಂಪಾದ ಕಣ್ಣುಗಳು; ಉಟ್ಟಿದ್ದುದು ರಕ್ತವರ್ಣದ ಪಂಚೆ; ಎರಡು ಕೈಗಳಲ್ಲಿಯೂ ಎರಡು ತಾಮ್ರದ ಬಳೆಗಳು; ಕತ್ತಿನಲ್ಲಿ ರುದ್ರಾಕ್ಷಿಸರ; ಆ ಸರಮೊಡನೆ ಯಾವುದೋ ಹರಿದ್ರವರ್ಣದ ದಾರ; ಒಟ್ಟಿನಲ್ಲಿ ಅಷ್ಟು ಹಿತವಲ್ಲದ ರೂಪು ಆತನದು. ನೋಡಿದರೆ ಇಂಥ ಜಾತಿಯವನೆಂದು ಹೇಳುವುದಕ್ಕಾಗುತ್ತಿರಲಿಲ್ಲ.

ಊರಿನ ಹೊರಗೆ, ದೂರ ಪಶ್ಚಿಮಭಾಗದಲ್ಲಿ ಆತನ ಮನೆ. ಅಲ್ಲಿ ವಿಶೇಷ ಜನಸಂಚಾರವಿರಲಿಲ್ಲ. ಮನೆಯ ಬಳಿಗೆ ಹೋಗುವುದಕ್ಕೆ ಯಾರಿಗೂ ಧೈರ್ಯವಿಲ್ಲ. ಆತನು ಯಾರೊಡನೆಯೂ ಸೇರುತ್ತಿರಲಿಲ್ಲ, ಮಾತನಾ

ಡುತ್ತಿರಲಿಲ್ಲ. ಎರಡೋ ಮೂರೋ ದಿನಕ್ಕೊಂದುಸಲ ಆತನು ಮನೆಯಿಂದ ಹೊರಬಿದ್ದು ಎಲ್ಲಿಗೋ ಹೋಗುತ್ತಿದ್ದುದನ್ನು ಒಬ್ಬಿಬ್ಬರು ನೋಡಿದ್ದರು. ಆತನ ವರ್ತನೆ ಜನದ ಕುತೂಹಲವನ್ನು ಕೆರಳಿಸಿತ್ತು. ನಾಲ್ಕಾರು ಮಂದಿ ಎದೆಗಾರರು ಸೇರಿ ಆತನ ಸ್ನೇಹಕ್ಕೆ ಪ್ರಯತ್ನಿಸಿ ಕೈಸಾಗದೆ ಬಿಟ್ಟಿದ್ದರು. ಒಬ್ಬಿಬ್ಬರು ಆತನೊಡನೆ ಬಲವಂತವಾಗಿ ಮಾತನಾಡಿ ಆತನು ದಕ್ಷಿಣ ದೇಶದವನೆಂದೂ ಹೆಸರು ವಿಶ್ವನಾಥ ಶಾಸ್ತ್ರಿಯೆಂದೂ ಬಹುಕಷ್ಟದಿಂದ ತಿಳಿದುಕೊಂಡಿದ್ದರು. ಇದಕ್ಕಿಂತ ಹೆಚ್ಚಾಗಿ ಆ ಕುತೂಹಲಿಗಳಿಗೆ ಯಾವ ವಿಚಾರವೂ ತಿಳಿಯದು. ಕೆಲವರು ಆತನು ಮಾಂತ್ರಿಕನೆಂದೂ, ಬಹಳ ದಿನಗಳಿಂದ ಯಾವುದೋ ಕಾರ್ಯದಲ್ಲಿ ತೊಡಗಿರುವನೆಂದೂ, ಆ ಪಾಳು ಬಿದ್ದ ದೆವ್ವದ ಮನೆಯಲ್ಲಿ ಒಬ್ಬನೇ ಇರಬೇಕಾದರೆ ಅವನ ಧೈರ್ಯ ಹೆಚ್ಚೆಂದೂ ಮಾತನಾಡಿಕೊಳ್ಳುತ್ತಿದ್ದರು. ಆದರೆ ಅವನನ್ನು ಪರೀಕ್ಷಿಸುವ ಎದೆ ಯಾರಿಗೂ ಇರಲಿಲ್ಲ. ಕೆಲವು ಪರ್ವ ದಿನಗಳಲ್ಲಿ ಶಾಸ್ತ್ರಿ ಅರ್ಧ ರಾತ್ರಿಯ ಸಮಯದಲ್ಲಿ ವಿಚಿತ್ರ ರೂಪಿನಿಂದ ಕೈಯಲ್ಲಿ ಬೆಂಕಿಹಿಡಿದು ಎಲ್ಲಿಗೋ ಹೊಗುತ್ತಿದ್ದುದು ಹಲವರ ದೃಷ್ಟಿಗೆ ಬಿದ್ದಿತ್ತು. ಇದರಿಂದ ಅನೇಕರಿಗೆ ಅವನ ವಿಚಾರದಲ್ಲಿ ಅಂಜಿಕೆಯೂ ವಿಸ್ಮಯವೂ ಉಂಟಾಗಿದ್ದುವು. ಅವನು ಮಾಟ ಮಾರಣ ಅಭಿಚಾರಾದಿ ಅವಿದ್ಯೆಗಳಲ್ಲಿ ನಿಷ್ಣಾತನೆಂದು ಸುತ್ತಲೂ ಸುದ್ದಿ ಹರಡಿತ್ತು.

ಇದರಲ್ಲಿ ಸತ್ಯವಿಲ್ಲದೆ ಇರಲಿಲ್ಲ. ಶಾಸ್ತ್ರಿ ಎಂಥ ಕಲಾವಿದನೋ ಅಂಥ ಶಕ್ತಿಪೂಜಕನಾಗಿದ್ದನು; ಅರ್ಕಗಣ

ಪತಿಯ ಆರಾಧಕನಾಗಿದ್ದನು. ಕಲಾಜ್ಞಾನ ಅವನಿಗೆ ರಕ್ತಗತವಾಗಿತ್ತು. ಇದರೊಡನೆ ಶಕ್ತ್ಯಾರಾಧನೆಯೂ ಅವಿಚ್ಛಿನ್ನವಾಗಿ ನಡೆಸುಕೊಂಡು ಬಂದಿತ್ತು. ಈ ವಿದ್ಯೆಯನ್ನು ಒಬ್ಬ ಸನ್ಯಾಸಿಯಿಂದ ಬಹು ಕಷ್ಟಪಟ್ಟು ಅಭ್ಯಾಸ ಮಾಡಿದ್ದನು. ವರ್ಷಾಂತರಗಳಿಂದ ಅವರ ಸಿದ್ಧಿಗಾಗಿ ಜೀವ ತೇಯುತ್ತಿದ್ದನು. ಬಿಸಿಲುಮಳೆಗಾಳಿಗಳೆನ್ನದೆ ಹಗಲಿರುಳೆನ್ನದೆ ಮೂರು ವರ್ಷಗಳ ದಿನ ತನ್ನ ಉಪಾಸನಾ ದೈವವಿರುವ ಸ್ಥಳವನ್ನು ಹುಡುಕಿಕೊಂಡು ಹುಚ್ಚನಂತೆ ಅಲೆದಾಡಿದ್ದನು. ಕೊನೆಗೆ ಅದು ಅವನಿಗೆ ಈ ಊರಿನ ಬಳಿ ಲಭ್ಯವಾಯಿತು.

ಊರಿಗೆ ಸ್ವಲ್ಪ ದೂರದಲ್ಲಿ ಶ್ಮಶಾನದ ಬಳಿ ಒಂದು ತೋಪು. ಅಲ್ಲಿ ಜನಸುಳಿಯದ ಜಾಗದಲ್ಲಿ ಒಂದು ಅರ್ಕವೃಕ್ಷ; ಬಹಳ ಪುರಾತನವಾದುದು. ಪ್ರತಿದಿನವೂ ಬೆಳಗಿನ ಹೊತ್ತು ಮೇಲಿನ ರೆಂಬೆಗಳಿಂದ ಹೂಗಳು ಬೀಳುವುವು. ಎಲ್ಲವೂ ನೇರವಾಗಿ ಬುಡಕ್ಕೇ ಬೀಳುವುವು. ಶಾಸ್ತ್ರಿ ಇದನ್ನೂ ಬಹಳವಾಗಿ ಪರೀಕ್ಷಿಸಿ ಕೊನೆಗೆ ಒಂದು ರಾತ್ರಿ ಬುಡವನ್ನು ಅಗೆದನು. ಒಳಗೆ ಒಂದು ಭಾಗದಲ್ಲಿ ಬೇರು ಗಣಪತಿಯ ಆಕಾರವನ್ನು ತಾಳಿತ್ತು. ಅದನ್ನು ಬಿಡಿಸಿ ತೆಗೆದುಕೊಂಡನು. ಕಡುಬಡವನಿಗೆ ಕಸವರ ಸಿಕ್ಕಿದಂತೆ ಶಾಸ್ತ್ರಿ ಈ ಶೋಧನದಿಂದ ಹಿಗ್ಗಿ ಹೋಗಿದ್ದನು. ತನ್ನ ಆರಾಧನೆಗೆ ಉಚಿತವಾದ ಸ್ಥಳವನ್ನು ಗೊತ್ತುಮಾಡಿಕೊಂಡು ಯಾರೂ ದಿಕ್ಕಿಲ್ಲದ ಆ ಪಾಳು ಮನೆಯಲ್ಲಿ ನಿಂತನು. ಪ್ರತಿದಿನವೂ ತನ್ನ ಪೂಜೆ ಮುಂದುವರಿದಂತೆಲ್ಲ ತನ್ನ ಇಷ್ಟದೈವದ ಮೂರ್ತಿ

ಯೊಂದನ್ನು ಸ್ವಲ್ಪ ಸ್ವಲ್ಪವಾಗಿ ಕಡೆಯತೊಡಗಿದನು.

ಅಂದಿನಿಂದ ಅವನ ವ್ರತ. ಅವನ ಇಷ್ಟಮೂರ್ತಿ ಇರುವ ಸ್ಥಳಕ್ಕೂ ಮನೆಗೂ ಒಂದು ಕಾಡು ದಾರಿಯಿತ್ತು. ಶಾಸ್ತ್ರಿ ಪ್ರತಿರಾತ್ರಿಯೂ ಅಲ್ಲಿಗೆ ಹೋಗಿ ಪೂಜೆ ಸಲ್ಲಿಸಬೇಕು. ಅಮಾವಾಸ್ಯೆ ಪೂರ್ಣಿಮಾದಿ ವಿಶೇಷ ದಿನಗಳಲ್ಲಿ ಪೂಜೆ ಬಹಳ ಕಠಿನ. ಉಪವಾಸದಿಂದಿದ್ದು ನಿಶೀಥ ಸಮಯದಲ್ಲಿ ಸ್ನಾನ, ಜಪ, ಹೋಮಾದಿಗಳು, ಮಂತ್ರ, ಪೂಜೆ, ಫಲಪುಷ್ಪಸಮರ್ಪಣೆಗಳು. ಒಂದು ಜಾವ ಈ ಪೂಜೆ ಮಡಿಯಲ್ಲಿ ನಡೆಯಬೇಕು. ಆಮೇಲೆ ಶಾಸ್ತ್ರಿ ಮನೆಗೆ ಹಿಂತಿರುಗುವನು. ಸ್ವಲ್ಪ ಆಹಾರವನ್ನು ತೆಗೆದುಕೊಳ್ಳುವನು. ಒಂದೆರಡು ಹಣ್ಣುಗಳು, ಸ್ವಲ್ಪ ನೀರು. ಅನಂತರ ವಿಶ್ರಾಂತಿ. ಮಾರನೆಯ ಮಧ್ಯಾಹ್ನದವರೆಗೂ ಅಖಂಡ ನಿದ್ರೆ.

ಇದು ಶಾಸ್ತ್ರಿಯ ನಿತ್ಯಾನುಷ್ಠಾನ. ಹೀಗೆ ಅವನ ಪೂಜೆ ಅವಿಚ್ಛಿನ್ನವಾಗಿ ನಡೆಯುಬಂದಿತ್ತು. ಈ ಹನ್ನೆರಡು ವರ್ಷಗಳಲ್ಲಿ ಅವನ ಪೂಜೆ ಮುಂದುವರಿದು ಉಪಾಸನಾದೇವತೆಯ ಸಾಕ್ಷಾತ್ಕಾರಕ್ಕೆ ಅವನನ್ನು ಹತ್ತಿರವಾಗಿ ಸುತ್ತಿದ್ದಂತೆಲ್ಲ ಅವನ ಕಲಾಕೃತಿಯೂ ಸ್ವಲ್ಪ ಸ್ವಲ್ಪವಾಗಿ ಅನುಪಮವಾದ ತೇಜಸ್ಸಿನಿಂದ ಸೂಕ್ಷ್ಮರೇಖಾ ವಿನ್ಯಾಸದಿಂದ ಮುಂದುವರಿಯುತ್ತ ಬಂದಿತ್ತು. ಇದಲ್ಲದೆ ಶಾಸ್ತ್ರಿಗೆ ಬಾಳಿನಲ್ಲಿ ಬೇರೆ ಆಶೆಯಿರಲಿಲ್ಲ; ಧ್ಯೇಯವಿರಲಿಲ್ಲ. ಈ ವ್ರತದ ಸಿದ್ಧಿಗಾಗಿ ಹಗಲಿರುಳೂ ಚಿಂತಿಸುತ್ತಿದ್ದನು; ನಿಷ್ಠೆಯಿಂದಿದ್ದನು. ತನ್ನ ಕೃತಿ ಸಂಪೂರ್ಣವಾಗುವ ಮಹಾದಿನವನ್ನು ಅತ್ಯಾಶೆಯಿಂದ ನಿರೀಕ್ಷಿಸುತ್ತಿದ್ದನು.

* * * *

ಒಂದು ರಾತ್ರಿ; ಅಮಾವಾಸ್ಯೆಯ ಹಿಂದಿನ ರಾತ್ರಿ; ಕಗ್ಗತ್ತಲು. ಶಾಸ್ತ್ರಿ ಯಥಾಪ್ರಕಾರ ಪೂಜೆಯಲ್ಲಿ ನಿರತನಾಗಿದ್ದಾನೆ. ಮುಂದೆ ಅದೇ ಹಳೆಯ ಅರ್ಕವೃಕ್ಷ. ಬುಡದಲ್ಲಿ ಮಂತ್ರಶುದ್ಧವಾದ ನೆಲದಲ್ಲಿ ಒಂದು ಕಾಲುಮಣೆ; ಅದರ ಮೇಲೆ ಎರಡು ಹಣತೆಗಳು; ಹಣತೆಗಳ ಮಧ್ಯೆ ಅರ್ಕಗಣಪತಿಯ ಮೂಲಮೂರ್ತಿ; ಬಳಿಯಲ್ಲಿ ಒಂದು ರಾಶಿ ರಕ್ತಪುಷ್ಪಗಳು; ಒಂದೆರಡು ಗಡಿಗೆಗಳು; ಸಣ್ಣದೊಂದು ನೀರಿನ ಗಿಂಡಿ; ಸಣ್ಣದೊಂದು ಗಂಟೆ. ಹಣತೆಯ ಬೆಳಕು ವಿವರ್ಣವಾಗಿ ಶಾಸ್ತ್ರಿಯ ಮುಖದ ಮೇಲೆ ಬಿದ್ದಿದೆ. ಅವನ ಹಣೆಯ ತುಂಬ ಕುಂಕುಮ; ಆಗತಾನೆ ಸ್ನಾನಮಾಡಿ ಬಂದಿದ್ದರಿಂದ ಒಪ್ಪೆಯಾಗಿ ಹರಡಿಕೊಂಡಿರುವ ಕೂದಲು; ಕೌಪೀನವೊಂದುಳಿದು ಮೈಮೇಲೆ ಬೇರೆ ಬಟ್ಟೆಯಿಲ್ಲ; ಏನನ್ನೋ ನಿರೀಕ್ಷಿಸುತ್ತಿರುವಂತಿರುವ ಕೆಂಗಣ್ಣುಗಳು; ಬಾಯಿಯಲ್ಲಿ ಸ್ಫುಟಾಸ್ಫುಟ ಮಂತ್ರೋಚ್ಚಾರಣೆ; ಮಧ್ಯೆ ಮಧ್ಯೆ ಅರ್ಕಗಣಪತಿಗೆ ಪುಷ್ಪಸಮರ್ಪಣೆ; ಮಂತ್ರಜಲಾಭಿಷೇಕ.

ನಟ್ಟಿರುಳಿನ ಸುಳಿಗಾಳಿ ಕೊರೆಯುತ್ತ ಸುಯ್ಯೆಂದು ಬೀಸಿತು. ಶಾಸ್ತ್ರಿ ಒಂದು ಸಲ ತಲೆಯೆತ್ತಿ ಸುತ್ತ ನೋಡಿದನು. ಮರಳಿ ದೃಷ್ಟಿಯನ್ನು ತಗ್ಗಿಸಿ ಎದುರಿಗಿದ್ದ ಮೂರ್ತಿಯನ್ನು ಕ್ಷಣಕಾಲ ತೀಕ್ಷ್ಣವಾಗಿ ನಿರ್ನಿಮೇಷನಯನನಾಗಿ ನೋಡಿದನು. ಅವನ ಮುಖದ ಮೇಲೆ ಒಂದು ನಗು ಮೈದೋರಿತು. ತನ್ನ ದೇವರು ಪ್ರಸನ್ನನಾಗುವಂತಿತ್ತು. ಈ ಹನ್ನೆರಡು ವರ್ಷಗಳಿಂದ ನಡೆದಿದ್ದ ವ್ರತ ನಾಳೆ ಒಂದು ದಿವಸದಲ್ಲಿ ಪೂರಯಿಸುವುದು. ತನ್ನ

ಶಕ್ತಿ, ತನ್ನ ಕ್ರಿಯೆ ಅಮರವಾಗಬಹುದು; ತಾನು ಲೋಕ ವಿಖ್ಯಾತನಾಗಬಹುದು.

ಅವನ ತುಟಿಗಳ ಮೇಲೆ ಪುನಃ ಒಂದು ತೃಪ್ತಿಸೂಚಕ ಹಾಸ ಮೈದೋರಿತು. ಥಟ್ಟನೆ ಬಳಿಯಲ್ಲಿದ್ದ ಒಂದು ಸಣ್ಣ ಅಲುಗಿನ ಆಯುಧವನ್ನು ತೆಗೆದುಕೊಂಡು ಸರ್ರನೆ ಎದೆಯ ಮೇಲೆ ಗೀರಿಕೊಂಡನು. ರಕ್ತ ಚಿಮ್ಮಿತು. ಕೆಳಗೆ ಮಡಿಕೆಯಲ್ಲಿದ್ದ ಅಕ್ಕಿಯ ಕಾಳುಗಳಿಗೆ ರಕ್ತವನ್ನು ಸೇರಿಸಿ ಕಲಸಿದನು. ಒಂದು ಸಲ ತಲೆಯೆತ್ತಿ ನೋಡಿದನು. ಮೇಲಿನ ರೆಂಬೆಗಳಿಂದ ನಾಲ್ಕು ಎಕ್ಕದ ಹೂಗಳು ಉದುರಿದುವು. ಆ ಹೂಗಳನ್ನೂ ಮಂತ್ರಾಕ್ಷತೆಯನ್ನೂ ಮೂರ್ತಿಗೆ ಅರ್ಪಿಸಿ ಅಂಜಲಿಬದ್ಧನಾಗಿ, ವೀರಾಸನ ಸ್ಥಿಮಿತನಾಗಿ ಕಣ್ಮುಚ್ಚಿ ಧ್ಯಾನವಶನಾದನು.

* * * *

ಮಾರನೆಯ ದಿನ ರಾತ್ರಿ; ತುಂಬಿದ ಭಾನುವಾರದ ಅಮಾವಾಸ್ಯೆಯ ರಾತ್ರಿ. ಅಂದಿಗೆ ಸರಿಯಾಗಿ ಶಾಸ್ತ್ರಿಯ ವ್ರತಕ್ಕೆ ಹನ್ನೆರಡು ವರ್ಷಗಳು ತುಂಬಿತ್ತು. ಆ ದಿನವೆಲ್ಲ ಅವನು ಉಪವಾಸ ಕಠಿನ ನಿಷ್ಠೆಗಳಲ್ಲಿ ಮಗ್ನನಾಗಿದ್ದನು. ನಡೆಯಬೇಕಾಗಿದ್ದ ಕೆಲವು ಸಣ್ಣ ಹೋಮಾದಿಗಳನ್ನು ಮನೆಯಲ್ಲಿಯೇ ನಡೆಯಿಸಿ, ತನ್ನ ಶಿಲ್ಪವನ್ನು ಪೂರ್ತಿ ಮಾಡುವುದರಲ್ಲಿ ತೊಡಗಿದ್ದನು. ರಾತ್ರಿ ಹನ್ನೆರಡು ಗಂಟೆಯ ವೇಳೆಗೆ ಕೆಲಸ ಮುಗಿಯುವುದಕ್ಕೆ ಬಂದಿತ್ತು. ಸಜೀವನಾದ ಗಣಪತಿ ಧ್ಯಾನಸ್ಥನಾಗಿ ಕುಳಿತಿರುವಂತೆ ತೋರುತ್ತಿತ್ತು. ರೇಖೆರೇಖೆಯೂ ಸೂಕ್ಷ್ಮವಾಗಿ ತೇಜೋಮಯವಾಗಿ ಬಂದಿತ್ತು. ಮುಖಭಾವದಲ್ಲಿ

ಪರಿಪೂರ್ಣತೆ ನೆಲೆಸಿತ್ತು. ಅವಯವಗಳಲ್ಲಿ ಸೌಷ್ಠವವೂ ರಾಗವೂ ಕಾಣುತ್ತಿದ್ದುವು. ಶಿಲ್ಪಶಾಸ್ತ್ರ ಕಲಾಮಯ ವಾಗಿ ರೂಪುಗೊಂಡಿತ್ತು.

ಶಾಸ್ತ್ರಿಯ ಮನಸ್ಸಿನಲ್ಲಿ ಹಿಡಿಯಲಾಗದ ಹೆಮ್ಮೆ, ಉದ್ವೇಗ, ಭಾವ. ಕ್ಷಣ ಕ್ಷಣಕ್ಕೂ ಮೈಯಲ್ಲಿ ರೋಮಾಂಚನ. ಒಂದೆರಡು ಗಳಿಗೆ ಸ್ತಬ್ಧನಾಗಿ ತನ್ನನ್ನೇ ಮರೆತು ತನ್ನ ಶಿಲ್ಪವನ್ನು ನೋಡಿದನು.—ಇಂದು ತನ್ನ ಪೂಜೆ ಸಫಲವಾಗಬೇಕು; ತನ್ನ ಇಷ್ಟದೈವ ತಾನು ಕಡೆದಿರುವ ಅಮೃತಶಿಲಾವಿಗ್ರಹದ ರೂಪಿನಲ್ಲಿಯೇ ತನಗೆ ದರ್ಶನ ಕೊಡಬೇಕು; ತನ್ನ ಉಪಾಸನಾದೈವ ಇಂದು ಸಂಪೂರ್ಣವಾಗಿ ಒಲಿಯಬೇಕು.

ಶಾಸ್ತ್ರಿ ಸ್ನಾನಮಾಡಿ ರಕ್ತವಸ್ತ್ರಗಳನ್ನು ಧರಿಸಿ ಆ ಮಹಾದಿನಕ್ಕಾಗಿ ಜೀವವೊಂದನ್ನು ಬಲಿಗೊಟ್ಟು ಅರ್ಕ ವೃಕ್ಷದ ಮುಂದೆ ಪೂಜೆಗೆ ಕುಳಿತಿದ್ದಾನೆ. ಸಾಮಾನ್ಯ ಪೂಜೆಯಲ್ಲಿ ರಾತ್ರಿಯ ಬಹುಭಾಗ ಕಳೆದಿದೆ. ಮಂತ್ರ ಶುದ್ಧವಾದ ಸ್ಥಳದಲ್ಲಿ ವೀರಾಸನದಿಂದ ಕುಳಿತು, ಧ್ಯಾನ ಮಗ್ನನಾಗಿದ್ದಾನೆ. ಮುಂದೆ ಒಂದು ಕುಂಡದಲ್ಲಿ ಅಗ್ನಿ ಪ್ರಜ್ವಲಿಸುತ್ತಿದೆ; ಪಕ್ಕದಲ್ಲಿ ಎರಡು ಗಡಿಗೆಗಳಲ್ಲಿ ಕೆಂಪು ಹಳದಿಯ ಅನ್ನಗಳು ತುಂಬಿವೆ: ಒಂದು ಕಡೆ ರಕ್ತ ಪುಷ್ಪಗಳು ರಾಶಿಯಾಗಿ ಬಿದ್ದಿವೆ. ಅವನನ್ನೂ ಗಿಡವನ್ನೂ ಸೇರಿಸಿಕೊಂಡು ಹಳದಿಯ ದಾರವೊಂದು ಮೂರು ಸುತ್ತು ಹಾಕಿಕೊಂಡಿದೆ. ಬಳಿಯಲ್ಲಿ ಸಣ್ಣ ಕುಡಿಕೆಗಳಲ್ಲಿ ತುಪ್ಪ, ಮಂತ್ರಾಕ್ಷತೆ ಮೊದಲಾದ ಹೋಮಸಾಮಗ್ರಿಗಳಿವೆ. ಶಾಸ್ತ್ರಿ ತನ್ನ ಮುಂದಿರುವ ಮೂಲ ಮೂರ್ತಿಗೆ ಪುಷ್ಪ

ಸಮರ್ಪಿಸುತ್ತ ತನ್ನ ಮೈಯಿನ ರಕ್ತದಿಂದ ಕಲಸಿದ ಅಕ್ಕಿಯ ಕಾಳುಗಳನ್ನು ನಿವೇದಿಸುತ್ತಿದ್ದಾನೆ. ಅಡಿಗಡಿಗೆ ಗಟ್ಟಿಯಾಗಿ ಮಂತ್ರೋಚ್ಚಾರಣೆ ಮಾಡುತ್ತ ಆ ಭೀಕರ ವಾತಾವರಣದ ಮೌನವನ್ನು ಕೆಣಕುತ್ತಿದ್ದಾನೆ. ಹಣತೆಗಳು ವಿಷಣ್ಣವಾಗಿ ಉರಿಯುತ್ತಿವೆ. ಅರ್ಕವೃಕ್ಷದ ಮೇಲಿನ ರೆಂಬೆಗಳು ನಟ್ಟಿರುಳಿನ ಆ ಸುಳಿಗಾಳಿಗೆ ತೂಗುತ್ತ ಅಮಾನುಷ ಸನ್ನಿವೇಶವೊಂದನ್ನು ಕಲ್ಪಿಸಿದೆ.

ಸಾಧಕನು ಇದ್ದಕ್ಕಿದ್ದಂತೆ ತಲೆಯೆತ್ತಿ ಕೆಂಪು ಅನ್ನವನ್ನು ಎಂಟು ದಿಕ್ಕುಗಳಿಗೂ ಎಸೆದು, ದಿಗ್ಬಂಧನಮಾಡಿ ಮೂರು ಸಲ ತನ್ನನ್ನು ಸುತ್ತಿಕೊಂಡಿದ್ದ ಅರಿಶಿನದ ದಾರವನ್ನು ಮುಟ್ಟಿ ಮೂರುಸಲ ನೆಲವನ್ನು ಬಡಿದು ಕುಳಿತುಕೊಂಡನು. ಮರಳಿ ಒಂದು ಕ್ಷಣ ಬಿಟ್ಟು, ಗಡಿಗೆಯಲ್ಲಿದ್ದ ಹರಿದ್ರಾನ್ನವನ್ನು ಮೇಲೆ ಕೆಳಗೆ ಎಸದು, ಮುಂದಿದ್ದ ಅಗ್ನಿಯನ್ನು ಪುಟಗೊಳಿಸಿ, ಅದರಲ್ಲಿ ಅನ್ನವನ್ನು ಜೇಳಿದನು. ಹತ್ತಿರದಲ್ಲಿದ್ದ ತೀಕ್ಷ್ಣಾಯುಧವೊಂದನ್ನು ಕೈಗೆತ್ತಿಕೊಂಡು ಎದೆಯಲ್ಲಿ ಸರಸರನೆ ಎಳೆದುಕೊಂಡನು. ನೆತ್ತರು ಹೊರಹೊಮ್ಮಿ ಸಣ್ಣ ಕುಡಿಕೆಯೊಂದನ್ನು ತುಂಬಿತು. ಅದನ್ನೂ ಮೂರುಸಲ ನೆಲಕ್ಕೆ ಸೋಕಿಸಿ ಶುದ್ಧೋದಕದಿಂದ ಅಭಿಮಂತ್ರಿಸಿ ಬೆಂಕಿಯಲ್ಲಿ ಸ್ವಲ್ಪ ಸ್ವಲ್ಪವಾಗಿ ಹೋಮಮಾಡಿದನು. ನಡುವೆ ಮೂರ್ತಿಗೆ ಪುಷ್ಪಾರ್ಪಣೆ, ಅರ್ಕಪತ್ರ ಪೂಜೆ, ಮಂತ್ರ ಜಲಾಭಿಷೇಕ. ಅದರ ಮಧ್ಯೆ ವೀರಗಣಪತಯೇ ಸ್ವಾಹಾ—ತಾಂಡವಗಣಪತಯೇ ಸ್ವಾಹಾ—ಮಹಾಗಣಪತಯೇ ಸ್ವಾಹಾ—ವಿಜಯಗಣಪತಯೇ ಸ್ವಾಹಾ—ಋಣವಿಮೋಚನಗಣಪತಯೇ

ಸ್ವಾಹಾ—ಶಕ್ತಿಗಣಪತಯೇ ಸ್ವಾಹಾ—ವಿಧಿಗಣಪತಯೇ ಸ್ವಾಹಾ—ಸದಾಶಿವಗಣಪತಯೇ ಸ್ವಾಹಾ—ಸ್ವಯಂ ವ್ಯಕ್ತಗಣಪತಯೇ ಸ್ವಾಹಾ—ಸೃಷ್ಟಿಗಣಪತಯೇ ಸ್ವಾಹಾ ಹೇರಂಬಗಣಪತಯೇ ಸ್ವಾಹಾ—ವಿಷರಾಜಗಣಪತಯೇ ಸ್ವಾಹಾ—ಚತುರ್ಮುಖಗಣಪತಯೇ ಸ್ವಾಹಾ—ಕ್ಷಿಪ್ರ ಗಣಪತಯೇ ಸ್ವಾಹಾ—ಯಾಗಗಣಪತಯೇ ಸ್ವಾಹಾ—ಅರ್ಕಗಣಪತಯೇ ಸ್ವಾಹಾ—ಸರ್ವಾರ್ಥಸಿದ್ಧಿಗಣ ಪತಯೇ ಸ್ವಾಹಾ—ಎಂಬ ಧ್ವನಿ. ಅವಕ್ಕೆ ಪ್ರತಿಯಾಗಿ ಮಧ್ಯೆ ಮಧ್ಯೆ ಅಗ್ನಿಗೆ ಅನ್ನಾಹುತಿ, ಆಜ್ಯಾಹುತಿ, ನಿಜ ದೇಹ ರಕ್ತಾಹುತಿ.

ಪ್ರಕೃತಿ ರುದ್ರವಾಗಿತ್ತು. ಸಾಧಕನು ತನ್ನ ಇಷ್ಟ ದೈವಕ್ಕೆ ಮನಸ್ಸಿನಲ್ಲಿ ವಂದಿಸಿ, ಹೊರಗೆ ಕೈಮುಗಿದು ಎದ್ದು ನಿಂತನು. ಒಂದು ಕ್ಷಣ ಉಗ್ರದೃಷ್ಟಿಯಿಂದ ಆಕಾಶವನ್ನು ನೋಡಿದನು. ಕಣ್ಮುಚ್ಚಿ ಮತ್ತೆ ತೆರೆದು ಭ್ರೂಮಧ್ಯೆ ದೃಷ್ಟಿಯನ್ನು ಲೀನಗೊಳಿಸಿ ಪುನಃ ತನ್ನ ಮುಂದಿದ್ದ ಅರ್ಕಮೂರ್ತಿಯನ್ನೀಕ್ಷಿಸಿ ಪುಷ್ಪಗಳನ್ನ ರ್ಪಿಸಿ ಕೈಜೋಡಿಸಿದನು. ಅವನ ಮನಸ್ಸಿನಲ್ಲಿ ತುಮುಲ ಯುದ್ಧವಾಗುತ್ತಿತ್ತು; ಉಸಿರು ವೇಗವಾಗಿತ್ತು; ಮೈ ನಡುಗುತ್ತಿತ್ತು; ಮಂತ್ರೋಚ್ಚಾರಣೆ ತಾರಸ್ವರದಲ್ಲಿ ತಡೆದು ತಡೆದು ಬರುತ್ತಿತ್ತು. ಅರ್ಧನಿಮಿಷ ಕಣ್ಣು ಗಳನ್ನು ಮುಚ್ಚಿ ಮತ್ತೆ ತೆರೆದನು. ಆ ಅಮಾವಾಸ್ಯೆಯ ಕತ್ತಲು ಮಾಯವಾಗಿ ಅವನ ತಲೆಯ ಮೇಲೆ ಅನು ಪಮ ಜ್ಯೋತಿಯೊಂದು ಮಂಡಲಾಕಾರವಾಗಿ ತಿರುಗು ತ್ತಿತ್ತು. ಸಹಸ್ರವಾದ್ಯಗಳು ಒಟ್ಟಾಗಿ ಘೋರ್ಗರೆದಂ

ತಾಯಿತು. ಸರ್ವವೂ ರುದ್ರವಾಗಿ ಅಗ್ನಿಮಯವಾದಂತೆ ಕಾಣಿಸಿತು. ಸಾಧಕನು ಕೈಯೆತ್ತಿ ಭಾವವಶನಾಗಿ—"ಸ್ವಾಮಿಾ....ಸ್ವಾಮಿಾ...." ಎನ್ನುತ್ತ ಮುಂದುವರಿದನು. ಅವನ ಎದುರಿಗೆ ಅರ್ಕಗಣಪತಿಯ ಮಹಾರೂಪ; ತಾನು ಕಡೆದಿರುವ ಶಿಲ್ಪವನ್ನೇ ಹೋಲುವ ಆಕೃತಿ! ಮೂರ್ತಿಯ ಮುಖದ ಮೇಲೆ ಅದ್ಭುತ ಭಾವವೊಂದು ನೆಲೆಸಿದೆ; ಕಣ್ಣುಗಳು ಅವನನ್ನು ನುಂಗುವಂತೆ ನೋಡುತ್ತಿವೆ; ತಲೆಯ ಹಿಂದೆ ಮಹಾಜ್ಯೋತಿಯೊಂದು ಜ್ವಲಿಸುತ್ತಿದೆ; ಸಪ್ತಮುಖಗಳನ್ನು ಕೆದರಿಕೊಂಡು ಸರ್ಪ ಬುಸುಗುಟ್ಟುತ್ತಿದೆ;....ಅದೇ ಕಿರೀಟ; ಅದೇ ದಿವ್ಯಾಯುಧಗಳನ್ನು ಹಿಡಿದಿರುವ ಅಷ್ಟಭುಜಗಳು; ಅದೇ ಸರ್ಪ; ಅದೇ ಪೀಠ; ಮೂರ್ತಿಯ ಮುಖದಲ್ಲಿ ಅದೇ ರುದ್ರಹಾಸ; ಅದೇ—ತನ್ನದೇ—ಅದ್ಭುತ ಕಲಾ ವೈಖರಿ!

ಸಾಧಕನು ಆ ತೇಜೋರಾಶಿಯಿಂದ ಬೆಂದುಹೋದಂತಾಗಿ ವಿಕೃತಕಂಠದಲ್ಲಿ—"ಈ ಹನ್ನೆರಡು ವರ್ಷ....ಈ ಹನ್ನೆರಡು....ನಿನ್ನ ಪೂಜೆ....ಸಾಧನೆ....ಸಾಧನೆ....ಅಮಾನುಷ...." ಎಂದು ಕೂಗಿಕೊಂಡನು. ಆ ಮಹಾಪ್ರಭೆ ಜಾಜ್ವಲ್ಯಮಾನವಾಗಿ ಸಹಸ್ರ ಸೌದಾಮಿನೀ ಪ್ರಕಾಶದಿಂದ ಕಣ್ಣು ಕೋರಯಿಸುವಂತಾಯಿತು. ಎದುರಿಗಿದ್ದ ಗಣಪತಿಯ ಬೃಹದ್ರೂಪ ಕಠೋರತರವಾಗಿ ಅಸಾಧ್ಯವಾಗಿ ಎಲ್ಲೆಯಿಲ್ಲದೆ ಬಳೆದಂತಾಯಿತು. ಸಾಧಕನು ಭೀತನಾಗಿ ವಿಕಟಕ್ಷೀಣಸ್ವರದಲ್ಲಿ ಕಿರಿಚಿದನು—"ಸಾಕು, ಸಾಕು; ಇನ್ನು ತಡೆಯಲಾರೆ." ಅವನ ಚೇತನವೆಲ್ಲ ಉಡುಗಿ ಹೋಯಿತು. ಕಣ್ಣು ಕತ್ತಲಿಟ್ಟಿತು. ಅಸಹಾಯನಾಗಿ

ಸ್ಮೃತಿಹೀನನಾಗಿ ಕೆಳಗೆ ಬಿದ್ದುಬಿಟ್ಟನು. ಬಾಯಿಂದ ರಕ್ತ ನೊರೆನೊರೆಯಾಗಿ ಹೊರಟಿತು.

ಕತ್ತಲು ತಾನೇ ತಾನಾಗಿತ್ತು. ಅರ್ಕವೃಕ್ಷದ ಬುಡದಲ್ಲಿದ್ದ ಹಣತೆಗಳು ಆರಿಹೋಗಿ ಬತ್ತಿಗಳಲ್ಲಿ ಬರಿಯ ಕೆಂಡ ಮಾತ್ರ ಕಾಣುತ್ತಿತ್ತು. ಶ್ಮಶಾನಪ್ರಾಂತದಿಂದ ಗೂಗೆಗಳ ಗೋಳಿನ ದನಿ ಕೇಳುತ್ತಿತ್ತು. ಗಾಳಿ ಸುಯ್ಯೆನ್ನುತ್ತ ಬೀಸುತ್ತಿತ್ತು.

೨

ಇದು ನಡೆದು ಬಹಳ ದಿನಗಳಾಗಿವೆ. ಊರಿನ ಹೊರಗೆ ಶಾಸ್ತ್ರಿ ಇದ್ದ ಪಾಳುಮನೆ ಈಗ ಬಿದ್ದುಹೋಗಿದೆ. ದನ ಕಾಯುವ ಹುಡುಗರು ಹೆದರಿಕೆಯಿಂದ ಈಗಲೂ ಆ ಮನೆಯ ಬಳಿಗೆ ಹೋಗುವುದಿಲ್ಲ. ಅಲ್ಲಿದ್ದ ಗಣಪತಿಯ ವಿಗ್ರಹ ಎಲ್ಲಿ ಹೋಯಿತೆಂಬುದು ಯಾರಿಗೂ ತಿಳಿಯದು. ಆದರೆ ಆ ಅನುಪಮವಾದ ಕೃತಿ ನೆಲೆಸಿದ್ದ ಪೀಠದ ಸ್ವಲ್ಪ ಭಾಗ ಮಾತ್ರ ನೆರೆಯೂರಿನ ಒಂದು ಪ್ರದರ್ಶನಮಂದಿರದಲ್ಲಿ ಸೇರಿದೆ.



# ಎಲುಬಿನ ಪ್ರೇಮ



Out of the deep a spark
Out of the clouds a lark
Out of the past a pain
Out of the dead cold ashes
—Life again.

—JOHN TABB.

ಅಸಾಧ್ಯವಾದ ರಾತ್ರಿ. ಕತ್ತಲು. ಕೋಣೆಯಲ್ಲಿ ಒಬ್ಬಳೇ ಕುಳಿತಿದ್ದಳು. ಅವಳಿಗೀಗ ಹದಿನಾರು ವರ್ಷ. ಗಂಡನು ಕಾಲವಾಗಿ ಐದು ವರ್ಷವಾಗಿತ್ತು. ಮದುವೆಯಾದ ವರ್ಷದಲ್ಲಿಯೇ ತೀರಿಹೋಗಿದ್ದನು. ದುಃಖದ ಭರದಲ್ಲಿ ಕಂಗಳಿಂದ ನೀರು ಧಾರಾಳವಾಗಿ ಹನಿಯುತ್ತಿತ್ತು. ಮೌನವಾಗಿ ಅಳುತ್ತಿದ್ದಳು.

ಹತ್ತು ನಿಮಿಷ ಕಳೆಯಿತು. ಅವಳ ಗಮನವು ತಟ್ಟನೆ ಕಿಟಕಿಯ ಕಡೆಗೆ ಹೋಯಿತು. ನೆಟ್ಟ ನೋಟದಿಂದ ನೋಡುತ್ತಿದ್ದಳು. ದೇಹವು ತರತರನೆ ಕಂಪಿಸುತ್ತಿತ್ತು. ಕಿಟಕಿಯಲ್ಲಿ ಬರಿಯ ಎಲುಬುಗಳ ಕಪಾಲವೊಂದು ತೂಗಾಡುತ್ತಿತ್ತು. ಕಂಬಿಗಳನ್ನು ಮೂಳೆಯ ಕೈಯೊಂದು ಹಿಡಿದುಕೊಂಡಿತ್ತು. ಕಣ್ಣುಗಳಿರುವ ಸ್ಥಳದಲ್ಲಿ ಆಳವಾದ ಗುಳಿಗಳಿದ್ದುವು.

ತರುಣಿಯು ಮೂಲೆಯಲ್ಲಿ ಕುಳಿತಿರುವುದನ್ನು ಕಂಡು ವಿಕಾರವಾಗಿ, ಭಯಂಕರವಾಗಿ ನಕ್ಕಿತು. ತರುಣಿಯು ಗಾಬರಿಪಟ್ಟು ಸುಮ್ಮನಿದ್ದಳು.

ಅಸ್ಥಿಯು ಮಾತನಾಡುವುದಕ್ಕಾರಂಭಿಸಿತು.

"ನಾನು ನಿನ್ನ ಗಂಡ—"

"..............."

"ಖಂಡಿತ ನಾನು ನಿನ್ನ ಗಂಡ."

"..............."

" ನನ್ನ ಈ ರೂಪ ನೋಡಿ ಅನುಮಾನವೆ ? "

"..............."

" ಯಾಕೆ ಹಾಗೆ ಬೆಪ್ಪಾಗಿ ಕುಳಿತಿದ್ದೀಯ ? ನನ್ನ ಭೂತ ಅಂತ ತಿಳಿದಿಯಾ ? ಅಯ್ಯೋ ಹುಚ್ಚಿ—"

"..............."

" ನಿನ್ನ ನೋಡಿ ಹೋಗೋಕೆ ಬಂದೆ. ಬಹಳ ದಿನ ವಾಗಿತ್ತು. ನಿನಗಷ್ಟು ಭಯವಾದರೆ ಹೊರಟು ಹೋಗು ತ್ತೇನೆ. ಯಾಕೆ ಅನುಮಾನ ? "

ಅಸ್ಥಿಯು ಮಾಯವಾಯಿತು.

ತರುಣಿಗೆ ಕೊಂಚ ಧೈರ್ಯಬಂದಿತು. ಮೈಯೆಲ್ಲಾ ಬೆವತಿತ್ತು. ಹಾಗೆಯೇ ಕಿಟಕಿಯಲ್ಲಿ ಹಣಿಕಿ ನೋಡಿ ದಳು. ಯಾರೂ ಇರಲಿಲ್ಲ. ತಂಗಾಳಿಯು ಮಾತ್ರ ತಣ್ಣನೆ ಬೀಸುತ್ತಿತ್ತು. ಹಾಗೆಯೇ ಅವಳಿಗೆ ನಿದ್ರೆಯ ಜೊಂಪು ಹತ್ತಿತು.

* * * *

ಮಧ್ಯರಾತ್ರಿ. ತರುಣಿಯು ಮೊದಲಿನಂತೆ ಕುಳಿತಿ ದ್ದಳು. ಮತ್ತೆ ಕಿಟಕಿಯ ಬಳಿ ಸದ್ದಾಯಿತು. ತಿರುಗಿ ನೋಡಿದಳು. ನಿನ್ನೆ ಬಂದಿದ್ದ ತಲೆಯೋಡು ಅವಳ ಕಡೆಯೇ ನೋಡುತ್ತ ನಿಂತಿತು.

" ಇನ್ನೂ ನಂಬೊಲ್ಲವೆ ? "

"..............."

" ಸರಿ....ಹಾಗಾದರೆ ನಿನಗೇಕೆ ತೊಂದರೆ."

"..............."

" ನಿನ್ನ ಸಂಕಟ ನೋಡಿ, ಕಳೆಯೋಣ ಅಂತ ಬಂದೆ."

" "

"ಮಾತಾಡೋಕೆ ಭಯವೆ?"

"..............."

"ಹೋಗಲಿ ಬಿಡು........ಸುಮ್ಮನೆ ಯಾಕೆ ಬಲವಂತ ಮಾಡಲಿ."

ಅಸ್ಥಿಯು ಮತ್ತೆ ಕಣ್ಣಿಗೆ ಕಾಣದಾಯಿತು.

ತರುಣಿಯ ದೃಷ್ಟಿಯು ಕಿಟಕಿಯ ಕಡೆಗೆ ಹೋಗಿತ್ತು. ಆಗ ಅವಳಿಗೆ ತಿಳಿವಿತ್ತು. ಮುಖದಲ್ಲಿ ಭಯದ ಜೊತೆಗೆ ಸಂತೋಷವು ಬಹುಸ್ವಲ್ಪ ಮೂಡಿತ್ತು. ಧೈರ್ಯ ಬಂದಂತಾಯಿತು. ಬೇಗನೆದ್ದು ಕಿಟಕಿಯೊಳಗೆ ತಲೆಯಿಟ್ಟು "ಬನ್ನಿ, ಬನ್ನಿ! ತಪ್ಪಾಯ್ತು!" ಎಂದು ಗಟ್ಟಿಯಾಗಿ ಕೂಗಿದಳು. ಅವಳ ಸ್ವರವು ಇರುಳಲ್ಲಿ ಲೀನವಾಗಿ ಹೋಯಿತು. ಕೊಂಚ ಕಾದಿದ್ದಳು, ಯಾರೂ ಬರಲಿಲ್ಲ. ಅಳು ಬಂದು ಸುಮ್ಮನೆ ಕಂಬನಿಕರೆದಳು.

* * * *

ನಡುರಾತ್ರಿ. ಗಾಳಿಯು ರೊಯ್ಯನೆ ಬೀಸುತಿದೆ. ತರುಣಿಯು ಕಿಟಕಿಯ ಬಳಿ ಆನಂದದಿಂದ ನಲ್ಲನನ್ನು ನಿರೀಕ್ಷಿಸುತ್ತ ನಿಂತಿದ್ದಳು.

ಅಸ್ಥಿಯು ಕಿಟಕಿಯ ಹತ್ತಿರಕ್ಕೆ ಬಂದಿತು. ತಕ್ಷಣ ಬಂದುದರಿಂದ ಮೊದಲು ಇಬ್ಬರಿಗೂ ಕೊಂಚ ಗಾಬರಿಯಾಯಿತು. ಒಂದು ಕ್ಷಣ ಮಾತಿಲ್ಲ.

"........ಈಗ ತಿಳೀತೆ?"

"........ಹುಂ........!"

"ಇನ್ನೂ ಪೂರ್ತಿ ಭಯ ಹೋಗಿಲ್ಲ?"

"ಹೋಗದೇ ಏನು........ಎಲಾ ಹೋಗಿದೆ."

" ಮನುಷ್ಯರೇ ಹೀಗೆ ಮೊದಲು."

" ಉಂ....ಯಾಕೆ ಹೀಗೆ ಬಂದಿದ್ದೀರಿ ?"

" ಯ್ಯಾಕೇ....? ನಿನಗೆ ತಿಳೀದು.......ವಿಷಯ ಬಲು ದೊಡ್ಡದು...."

" ಏನು ಹೇಳಿ—"

" ಹೋಗಲಿ ತಿಳಕೊ ಹೇಳತೀನಿ— "

" ಆತ್ಮ, ದೇಹ ಅಂತ ಎರಡುಂಟು ಒಬ್ಬನಲ್ಲಿ. ಸಾಮಾನ್ಯವಾಗಿ ಎರಡಕ್ಕೂ ತೃಪ್ತಿಯುಂಟು. ನನ್ನ ಆತ್ಮಕ್ಕೆ ಆಗಿತ್ತು. ನನ್ನ ದೇಹಕ್ಕೆ ಆಗಿರಲಿಲ್ಲ. ಈಗ ಆ ತೃಪ್ತಿಯನ್ನು ಹೊಂದುವುದಕ್ಕೆ ಈ ದೇಹ ಬಂದಿದೆ."

" ದೇಹ ಮಾತ್ರ ಹೇಗೆ ಬಂದಿತು ?"

" ನೀನು ಕೇಳೋದು ಒಳ್ಳೇ ಪ್ರಶ್ನೆಯೆ.......ಆತ್ಮ ಬಿಟ್ಟು ಹೋದ ಮೇಲೆ ದೇಹವು ನಾಯಿಪಾಲೆ. ಆತ್ಮ ಹೋಗುವುದಕ್ಕೆ ಒಂದುಗಳಿಗೆ ಮುಂಚೆ ದೇಹವು ಅದನ್ನು ಒಂದು ಅನುಗ್ರಹ ಕೇಳಿತು; ಅದರಲ್ಲಿನ ಒಂದು ಅಣು ಮಾತ್ರ ಚೇತನ ಕೊಡೆಂದು. ಆ ಅಣುವಿನಶಕ್ತಿ ನನ್ನನ್ನು ಇಲ್ಲಿಗೆ ತಂದಿತು."

" ನಿಮ್ಮನ್ನು ಗುರ್ತಿಸಲಿಕ್ಕೆ ಸಾಧ್ಯವಾಗಲಿಲ್ಲ."

" ಹೋಗಲಿ.......ಯಾಕೆ ಇಷ್ಟು ಇಳಿದು ಹೋಗಿದ್ದೀಯಾ ?"

" ಅಯ್ಯೋ.......ಅದರ ಮಾತೇಕೆ ಬಿಡಿ."

" ಯಾಕೆ....ಏನಾಗಿದೆ ಹೇಳು ?"

" ಯಾವಾಗಲೂ ನಿಮ್ಮದೇ ಯೋಚನೆ."

" ಅಯ್ಯೋ ಹುಚ್ಚಿ.......ಎಲ್ಲಿ ಕೈ ಕೊಡು."

" ಹುಂ...........! "

" ಆಂ........ಮದುವೆಯಲ್ಲಿ ಅಷ್ಟು ಕೋಮಲವಾಗಿತ್ತು."

" ಹ್ಹಾ !....ಹ್ಹಾ !....ಬಹಳ ನೋ........! "

" ಮಾಂಸದಿಂದ ತುಂಬಿಕೊಂಡಿರದ ದೇಹವೇ ಹಾಗೆ. ಬರೀ ಮೂಳೆ....ಹೋಗಲಿ ಬಿಡು....ನಿನಗೆ ನೋವಾಗದಂತೆ ದೂರದಲ್ಲಿ ನಿಂತು ನೋಡಿಕೊಂಡು ಹೋಗುತ್ತೇನೆ."

" ಇಲ್ಲ..........ಅದಕ್ಕಲ್ಲ. ಏನೋ ಬುದ್ಧಿಯಿಲ್ಲದೆ ಅಂದೆ."

" ಅಯ್ಯೋ ಹುಚ್ಚಿ....ಅದಕ್ಕೇಕೆ ಅಳು ? "

" ನಿಮ್ಮೊಡನೆ ಒಂದು ಸಲವೂ ಸರಿಯಾಗಿ ಮಾತಾಡಿರಲಿಲ್ಲ. "

" ಈಗ ಬಂದಿದ್ದೇನಲ್ಲ....ಬೇಕಾದ ಹಾಗೆ ಮಾತನಾಡು."

" ಆದರೆ ಆ ರೂಪಿನಲ್ಲಲ್ಲ...."

" ಹಾಗಾದರೆ ನೀನು ರೂಪಿಗೆ ಬೆಲೆಕೊಡುವೆಯಾ ! "

" ಅಲ್ಲ.......ಖಂಡಿತ ಹಾಗಲ್ಲ.......ಆಗ ಸುಂದರವಾಗಿದ್ದಿರಿ ಅಂತ ಅಷ್ಟೆ. "

" ಚಿಂತೆಯಿಲ್ಲ....ಹೊತ್ತಾಯಿತು ಹೋಗ್ತೇನೆ....... ನಾಳೆ ತಿರುಗಿ ಇದೇ ಹೊತ್ತಿಗೆ ಬರ್ತೇನೆ."

" ಇಲ್ಲ.......ಕೊಂಚ."

" ಇಲ್ಲ.......ಹೋಗಬೇಕು."

* * * *

"ಯಾಕೆ ಈದಿನ ಇಷ್ಟು ಹೊತ್ತು ?"

"ಬಹಳ ದೂರದಿಂದ ಬರಬೇಕು."

"ಯಾಕೆ ಹೀಗಿದ್ದೀರಿ?"

"ಬಹಳ ಆಯಾಸವಾಯ್ತು. ಬಹು ದೂರದಿಂದ ಬರಬೇಕು."

"ಇಲ್ಲಿಗೆ ಎಷ್ಟು ಮೈಲಿ?"

"ಪ್ರಪಂಚ ಎಲ್ಲಿ ಮೊದಲಾಗುತ್ತೊ ಅಲ್ಲಿಂದ...."

"ಮುಖದಲ್ಲಿ ಬಹಳ ಬೆವರು ಸುರೀತಿದೆ."

"ಹೌದು.......ಬಹಳ ಬಾಯಾರಿಕೆ........ಕೊಂಚ ನೀರು ತಾ—"

"ಹಾಗಿಂದ ಬನ್ನಿ ಬಾಗಿಲು ತೆರೀತೀನಿ."

"ಹುಂ....ತೆಗಿ—"

* * * *

"ಕಾಫಿ ಮಾಡಿಟ್ಟಿದ್ದೀನಿ....ಬಾಯಾರಿಕೆ ಅಂದರಲ್ಲ ಕುಡಿಯರಿ."

"ಆಗಲಿ....ಬಹಳ ದಿನ ಆಗಿತ್ತು ನಿನ್ನ ಕೈಲಿ ಕುಡಿದು."

"ಹುಂ.........."

* * * *

"ಯಾಕೆ ಹಣೇಲಿ ಕುಂಕುಮ ಇಟ್ಟಿಲ್ಲ ?"

"..............."

"ಮೊನ್ನೆಯಿಂದ ಹಣೆಯಲ್ಲಿಲ್ಲ."

"ಇಲ್ಲ....ಮರೆತು ಹೋಯಿತು."

"ಈಗ ನೋಡು ಮುಖ ಎಷ್ಟು ಅವಲಕ್ಷಣವಾಗಿ

ಕಾಣುತ್ತೆ."

"...............?"

"ಇನ್ನು ನಾನು ಬರ್ತೀನಿ ಹೊತ್ತಾಯಿತು........ ಒಂದೇ ಒಂದು........ಮುತ್ತು........"

"...............?"

"ಹೋಗಲಿ ಬಿಡು........"

"ಇಲ್ಲ........ಅದಕ್ಕಲ್ಲ."

"ಯಾಕೆ ಮತ್ತೆ ಅಷ್ಟು ನಾಚಿಕೆ?...........ನಾನೇನು ಹೊರಗಿನವನೆ?"

"ಇಲ್ಲ....ತಪ್ಪಾಯ್ತು........"

"..............."

"ನಾಳೆ ಬರ್ತೀನಿ ಹೋಗಲಾ?"

"ಒಬ್ಬಳೇ ಮಲಗಬೇಕು—"

"ಇಷ್ಟುದಿನ ಹೇಗಿದ್ದೆ....?"

"..............."

"ಹೋಗಲಿ....ಬಾಗಿಲು ಹಾಕು."

* * * *

"ಹಾಸಿಗೆ ಹಾಕು ಹೊತ್ತಾಯ್ತು. ಮಾತಿಗೆ ಕೊನೆ ಮೊದಲು ಇದ್ದರೆ ತಾನೆ."

"ಆಗಲೆ ಹಾಕಿದ್ದೀನಿ........ನೋಡಿ ನೀವೆ ಆಕಡೆ.... ನಿಮಗೆ ಕಣ್ಣೇ ಕಾಣವಲ್ಲದು."

"ಹೌದು....ನನ್ನ ಕಣ್ಣು ವಿಚಿತ್ರ ಯಾರು ಬಲ್ಲರು?"

"ಏನು........?"

"ಹೋಗಲಿ, ಹೊತ್ತಾಯ್ತು."

" ಹುಂ..........."

*   *   *   *

" ಈಗ ನೋಡು ಎಷ್ಟು ಸುಂದರವಾಗಿ ಕಾಣತೀಯ."

"..............."

" ಹಣೆ ತುಂಬ ಕುಂಕುಮ."

" ಹುಂ........ಹ್ಹು!"

" ತಲೆ ಸರಿಯಾಗಿ ಬಾಚಿಕೊಳ್ಳೋಕಿಲ್ಲವೆ........... ಎಲ್ಲಾ ಒಂದೊಂದಾಗಿ ಹೇಳಬೇಕೆ."

"..............."

" ಹೋಗಲಿ ನಾಳೆ ಆದರೂ ಆ ಕೆಲಸ ಮಾಡು."

" ಹುಂ........ಉಷ್.....ಷ್!"

" ಯಾಕೆ ಹಾಗೆ ಉಸಿರುಬಿಡತೀಯ?"

" ಹೊಟ್ಟೆಯಾಕೋ ಒಂದು ವಾರದಿಂದ ನೋಯುತ್ತೆ."

" ಕೈಕಾಲು ಎಲ್ಲಿ?........ಕೊಂಚ ಊದಿದೆ."

"..............."

" ಡಾಕ್ಟರಿಗೆ ಯಾರಿಗಾದರೂ ತೋರಿಸಿ ಒಂದಿಷ್ಟು ಔಷಧಿ ತೊಕೊಳ್ಳೋಕಿಲ್ಲವೆ."

" ತಗೋಬೇಕು."

" ಇಷ್ಟುದಿನ ಏನ್ಮಾಡತಿದ್ದೆ?"

"..............."

" ಹೋಗಲಿ ನನ್ನ ಸಂಗಡ ನಾಳೆ ಬಾ ಆಸ್ಪತ್ರೆಗೆ ಹೋಗೋಣ."

" ಆಗಲಿ........"

" ಅಷ್ಟುದೂರ ಬರತೀಯೋ ಇಲ್ಲವೊ?"

"ಇಲ್ಲ....ಬರತೀನಿ."

"ಏನು.........ಬರತೀಯೋ...........ಅಲ್ಲಿನವರನ್ನು ನೋಡಿದರೆ ನಿನಗೆ ಗಾಬರಿಯಾಗುತ್ತೆ."

"ಯಾಕೆ........ಏನು ಗಾಬರಿ?"

"ನನ್ನ ನೋಡಿಯೆ ಇಷ್ಟಾಯ್ತು."

"ಇಲ್ಲ........ಹುಂ........"

"ನಾನೆ ತರತೀನಿ........ಬಿಡು."

"ಹುಂ........ಉಷ್....ಷ್—!"

"ಮಲಗು........ಮಾತನಾಡಬೇಡ...."

* * * *

ರಾತ್ರಿ. ಕತ್ತಲು ಕವಿದಿದೆ. ಅಸ್ಥಿಯು ಕಿಟಕಿಯಲ್ಲಿ ತಲೆಯಿಟ್ಟು ಕೊಂಚ ಹೊತ್ತು ನಿಂತಿತು. ಅದರ ದೃಷ್ಟಿಗೆ ಏನೂ ಬೀಳಲಿಲ್ಲ. ಕೋಣೆಯಲ್ಲಿ ಯಾರೂ ಇರಲಿಲ್ಲ. ಸ್ವಲ್ಪ ಹೊತ್ತು ಕಾದಿದ್ದು ಹೊರಟು ಹೋಯಿತು.

* * * *

"ಯಾಕೇ ಬಾಗಿಲು ತೆರೀದೆ ಹಾಗೆ ಕೂತಿದ್ದೀಯ?"

"..............."

"ಯಾಕೆ ಮಾತಾಡೋಲ್ಲ....ಕೋಪವೆ?"

"..............."

"ಹೋಗಲಿ....ಮೈಲಿ ಹೇಗಿದೆ....ಮಗು ಯಾವುದು? ಗಂಡೋ ಹೆಣ್ಣೊ?"

ಬಾಗಿಲು ಧಡಿಲ್ಲನೆ ತಳ್ಳಿದ ಸದ್ದಾಯಿತು.

"ಅಳಿಯ ಬಂದಿದ್ದರು! ಅಳಿಯ ಬಂದಿದ್ದರು!"

ಎಂದು ಧ್ವನಿಯೊಂದು ಗಟ್ಟಿಯಾಗಿ ಕೇಳಿತು.

*    *    *    *

" ಏನೆ ?....ಖಂಡಿತ ಬಂದಿದ್ದನೆ ? "

" ಹೌದೂಂದ್ರೆ....ಬಂದಿದ್ದರು."

" ಹ್ಯಾಗಿದ್ದ....ಮಗಳು ಹೇಳೋ ಹಾಗೇನೆ ಇದ್ದನೆ ? "

" ಹೌದೂ........ಹಾಗೇ ಇದ್ದರು...........' ಮಗು ಸೌಖ್ಯವಾಗಿದೆಯೆ...........ಬಾಗಿಲು ತೆಗಿಯೆ ' ಅಂತ ಕೇಳಿದರು."

" ಹಾಗೇನು........! "

" ಹುಂ..............."

" ಯಾಕೆ ಅಳತಿ?........ಮುಖ್ಯ ನಮಗೆ ಬುದ್ಧಿಯಿಲ್ಲದೆ ಹೋಯಿತು....ಜನಗಳ ಬಾಯಿಗೆ ಹೆದರಿ ಅನ್ಯಾಯ ವಾಯಿತು....ಈ ವಿಷಯ ಯಾರಿಗೆ ತಿಳಿದಿತ್ತು."

" ತಿಳಿದಿದ್ದರೆ ಮಗು ಬಾಣಂತಿ ಸುಖವಾಗಿರೋರು. "

" ಜನಗಳಿಗೆ ಬೆದರಿದ ಫಲ."

*    *    *    *

" ಎಲ್ಲಿ ಹುಡುಕಿದರೂ ಸಿಗಲಿಲ್ಲವಲ್ಲೆ."

" ಎಲ್ಲಿ ಹೋದಳೊ........"

" ಯಾರನ್ನ ಕೇಳಿದರೂ ಗೊತ್ತಿಲ್ಲ ಅಂತ ಹೇಳ್ತಾರೆ."

" ಹೋಗಿ ವಾರವಾಯಿತು....ಹೊಟ್ಟೆಗಿಲ್ಲ. ಬಾಣಂತಿ. ಆ ಪರಮಾತ್ಮನೇ ಬಲ್ಲ."

" ದಾರಿಯಲ್ಲಿ ಅಳಬೇಡ...............ಎಲ್ಲಾ ನಮ್ಮ ಪ್ರಾರಬ್ಧ ಕರ್ಮ. ಯಾರೇನು ಮಾಡೋಕಾದೀತು ? "

" ಅವಳು ನಿಜ ಹೇಳಿದರೂ ಕೇಳದೆ ಹೋದೆ."

"ಇನ್ನ ಯಾಕೆ ಅಳತೀಯ ಆದ ಕೆಲಸಕ್ಕೆ?"

"ಹೀಗೆ ಬನ್ನಿ. ಆ ಹಾಳುಬಿದ್ದ ಛತ್ರದಲ್ಲಾದರೂ ನೋಡಿ ಬರೋಣ."

"ಅಲ್ಲಿ ಇರಲಿಲ್ಲ, ನೋಡಾಯ್ತು. ಎಲ್ಲಾದರೂ ಬಾವೀಲಿ ಬಿದ್ದಿರಬೇಕು."

"ನಾವೇ ಕೈಯಾರೆ ಕೊಂದಹಾಗಾಯಿತು."

"ಹೀಗೆ ಬಾರೆ....ಊರಿನ ಕೊನೇಲಿರೋ ಹಾಳು ಮನೇಲಿ ನೋಡಿ ಬಿಡೋಣ."

"ಬನ್ನಿ..........."

* * * *

ಊರಿನ ಅಂಚಿನಲ್ಲಿ ಒಂದು ಹಳೆಯ ಹಾಳು ಮನೆ. ಸುಮಾರಾಗಿ ದೊಡ್ಡದಾಗಿಯೇ ಇದ್ದಿತು. ಹಜಾರವಲ್ಲಿ ಬಹಳ ಕಸ ತುಂಬಿತ್ತು, ಮೇಲೆ ಬಾವಲಿಗಳು ಹಾರಾಡುತ್ತಿದ್ದುವು. ಕೊಂಚ ಮಬ್ಬುಮಬ್ಬು. ತರುಣಿಯು ನೆಲದ ಮೇಲೆ ಮಲಗಿದ್ದಳು. ಕಣ್ಣು ಮುಚ್ಚಿದ್ದಳು. ಮುಖವು ಸೊರಗಿ ಹೋಗಿತ್ತು. ಅವಳ ಎದೆಯ ಮೇಲಿನ ಬಟ್ಟೆಯು ಜಾರಿ ಕೆಳಗುರುಳಿತ್ತು. ತರುಣಿಯು ಏಳಲಿಲ್ಲ; ಕದಲಲೂ ಇಲ್ಲ.

* * * *

"ಆ ಹಾಳುಮನೆಯೇನಂದರೆ?"

"ಹೌದೆ........ಹೀಗೆ ಬಾ."

"ಬಹುದೂರವಾಯಿತು ಮನೆಗೆ."

"ಹೌದು....ಅಲ್ಲಿ ನೋಡು ಮಲಗಿರೋ ಹಾಗಿದೆ."

"ಹುಂ........!"

"ನೋಡು ಮೂವರೂ ಮಲಗಿದ್ದಾರೆ."

"ಹುಂ....! ಹುಂ!"

"ಅಗೋ ಅಳಿಯನು ಪಕ್ಕದಲ್ಲಿ ಮಲಗಿದ್ದಾನೆ!"

"ಹುಂ........ಮಗೂ ನೋಡಿ, ಮಲಗಿದೆ."

"ಬಾರೆ ಮುಂದಕ್ಕೆ ಹೋಗಿ ಅಳಿಯನ ಕ್ಷೇಮ ಸಮಾಚಾರ ಕೇಳೋಣ."

"ಅಲ್ಲಿ....ನೋಡಿ, ಹ್ಯಾಗೆ ಹೋಗತೀರಿ........ನಾಚಿಗ್ಗೇಡು."

"..............."

* * * *

ಭ್ರಾಂತಿಯ ತೆರೆ ಕಳಚಿಬಿತ್ತು. ಮಲಗಿದ್ದವಳು ಮಗಳೊಬ್ಬಳೇ. ಹೊಟ್ಟೆಗಿಲ್ಲದೆ ಸತ್ತಿದ್ದಳು.



# ಅಂತರಂಗ



ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ
ಪ್ರೇಯೋ ಮನ್ದೋ ಯೋಗಕ್ಷೇಮಾತ್ ವೃಣೀತೇ ॥

—ಉಪನಿಷತ್.

"ನಮಗೆ ತಿಳಿಯುದೆಯೋ ಎಷ್ಟೋ ಬಗೆಗಳಲ್ಲಿ ಹಣ ಸಂಪಾದನೆಯಾಗುತ್ತದೆ. ಕೆಲವು ಗಿರಾಕಿಗಳು ಅಜ್ಞಾನಿಗಳು; ಆಗ ನಮ್ಮ ತಿಳಿವಳಿಕೆಯನ್ನು ನೆಮ್ಮಿ ಲಾಭ ಪಡೆಯುವೆವು. ಇನ್ನು ಕೆಲವರು ಅಪ್ರಮಾಣಿಕರು," ಎಂದು ವ್ಯಾಪಾರಿ ಹೀರಾಚಂದ್ ಮೇಜಿನ ಮೇಲೆ ಮಂಕಾಗಿ ಉರಿಯುತ್ತಿದ್ದ ಮೇಣದ ಬತ್ತಿಯನ್ನು ಎತ್ತಿ ಹಿಡಿದನು. ಅದರ ಬೆಳಕು ಆಗಂತುಕನ ಮೇಲೆ ಬಿತ್ತು.

ವ್ಯಾಪಾರಿಯು ಸ್ವಲ್ಪ ಹೊತ್ತು ಬಿಟ್ಟು, "ಅಪ್ರಮಾಣಿಕರ ವ್ಯವಹಾರದಲ್ಲಿ ನಮ್ಮ ಸೌಜನ್ಯದಿಂದ ನಮಗೆ ಲಾಭ ಬರುವುದು," ಎಂದನು.

ಹರೀಂದ್ರನು ಆಗತಾನೆ ಅಂಗಡಿಗೆ ಬಂದಿದ್ದನು. ಅವನ ಕಣ್ಣುಗಳು ಅಲ್ಲಿನ ಕತ್ತಲೆ ಬೆಳಕುಗಳ ಬೆರಕೆಗೆ ಇನ್ನೂ ಒಗ್ಗಿರಲಿಲ್ಲ. ವ್ಯಾಪಾರಿಯಾಡಿದ ಮರ್ಮವಾಕ್ಯಗಳನ್ನು ಕೇಳಿ ತೀರ ಹತ್ತಿರದ ಬೆಳಕಿನಲ್ಲಿ ಕಣ್ಣು ಬಸವಳಿದಂತಾಗಲು ದುಃಖಪೂರ್ಣವಾದ ನಟ್ಟನೋಟವನ್ನು ತಿರುಗಿಸಿದನು.

ವ್ಯಾಪಾರಿಯು ನಡುವೆ ಮಾತುಹಾಕಿ, "ದೀಪಾವಳಿಯ ಹಿಂದಿನ ದಿನ ಬಂದಿರುವೆ. ನನ್ನ ವರ್ಷದ ಲೆಕ್ಕಾಚಾರ ವ್ಯವಹಾರಗಳನ್ನು ನೋಡುತ್ತಿರುವೆನು. ಇಂದು ವ್ಯಾಪಾರವಿಲ್ಲವೆಂದು ಖಚಿತವಾಗಿ ನಿನಗೆ ಹೇಳಿ ಬಿಡಬಹುದು. ನಿನ್ನ ವ್ಯಾಪಾರಕ್ಕೆ ಗಮನ ಕೊಟ್ಟರೆ ಕಾಲಹರಣವಾಗುತ್ತದೆ. ಅದನ್ನು ನೀನು ಕಟ್ಟಿ ಕೊಡ

ಬೇಕಾಗುವುದು. ನಾನು ಹಿಂದು ಮುಂದು ನೋಡಿ ವಿವೇಚಿಸುವವನು. ಗಿರಾಕಿಗಳೂ ವ್ಯಾಪಾರಿಗಳ ಸುಖ ದುಃಖಗಳನ್ನು ಯೋಚಿಸಬೇಕಲ್ಲವೆ ?" ಎಂದನು. ಹೀಗೆ ಹೇಳಿ ಹೀರಾಚಂದನು ಅಪನಂಬಿಕೆಯಿಂದ ಕನ್ನಡಕ ಮತ್ತು ಹುಬ್ಬುಗಳ ನಡುವೆ ಹರೀಂದ್ರನನ್ನು ದಿಟ್ಟಿಸಿದನು. ಹರೀಂದ್ರನು ಅನಂತ ಕರುಣಾದ್ರ್ರಹೃದಯನಾಗಿ ಮರುಕ್ಷಣವೆ ಭಯಾನಕ ಸ್ಫುರಿತನಾಗಿ ಮರುದಿಟ್ಟಿಯನ್ನು ಬೀರಿದನು.

"ಈಸಲ ನಾನು ಯಾವುದನ್ನೂ ಮಾರಲು ಬರಲಿಲ್ಲ. ಮಾರಲು ಯಾವ ಸಾಮಾನೂ ಇಲ್ಲ. ಆದರೆ ದೀಪಾವಳಿ ಜ್ಞಾಪಕಾರ್ಥವಾಗಿ, ನನ್ನ ಸೋದರ ಮಾವನ ಮಗಳಿಗೆ ಒಂದು ಬೆಲೆಯ ಉಡುಗೊರೆಯನ್ನು ಕೊಳ್ಳಲು ಬಂದಿರುವೆನು. ಈ ಸಣ್ಣವಿಷಯಕ್ಕೆ ನಿಮ್ಮನ್ನು ತೊಂದರೆ ಪಡಿಸಬೇಕಾಗಿದೆ. ಕ್ಷಮಿಸಬೇಕು" ಎಂದು ಹರೀಂದ್ರನು ನುಡಿದನು.

ಸ್ವಲ್ಪ ಹೊತ್ತು ಇಬ್ಬರೂ ಮೌನವಾಗಿದ್ದರು. ವ್ಯಾಪಾರಿಯು ಗಿರಾಕಿಯಾಡಿದ ವಾಕ್ಯಗಳನ್ನು ತನ್ನ ಮನಸ್ಸಿನ ತಕ್ಕಡಿಯಲ್ಲಿ ತೂಗಿದನು. ಅಂಗಡಿಯಲ್ಲಿದ್ದ ನಾನಾತೆರದ ಗಡಿಯಾರದ 'ಟಿಕ್ ಟಿಕ್' ನಾದವೂ ಅನತಿದೂರದ ಬೀದಿಯಲ್ಲಿ ಸುಳಿದಾಡುತ್ತಿದ್ದ ಗಾಡಿಗಳ ಶಬ್ದವೂ ಆಗಿನ ಶಾಂತವಾತಾವರಣವನ್ನು ಭೇದಿಸುತ್ತಿದ್ದುವು.

"ಸಂತೋಷ, ಹಳೆಯ ಗಿರಾಕಿಯಯ್ಯ ನೀನು. ಮದುವೆಯ ಪೀಠಿಕೆಯೇನೊ? ನಾನೇಕೆ ಅಡ್ಡಿಯಾಗಲಿ! ಇಗೊ ಈ ಕೈಗನ್ನಡಿಯು ಬಹಳ ಚೆನ್ನಾಗಿದೆ. ಇದು

ನನ್ನ ಬಳಿಗೆ ಬಂದ ಬಗೆಯನ್ನು ಹೇಳಲು ಹೊರಟರೆ ಬ್ರಹ್ಮಾಂಡ ಪುರಾಣವಾಗುತ್ತದೆ" ಎಂದು ವ್ಯಾಪಾರಿಯು ವಿಡಂಬನಾತ್ಮಕವಾಗಿ ನುಡಿದನು. ಹರೀಂದ್ರನ ಮುಖಕ್ಕೆ ರಾಗಗಳು ಸಹಸ್ರ ಸಹಸ್ರವಾಗಿ ನುಗ್ಗಿ ತುಮುಲ ಯುದ್ಧ ಮಾಡಿದುವು. ರೋಮಾಂಚಿತನಾದನು. ಮರುಕ್ಷಣವೆ ಆ ಸೂಕ್ಷ್ಮವ್ಯತ್ಯಾಸವು ಮಿಂಚಿನಂತೆ ಮಾಯವಾಯಿತು. ಅವನ ಕೈ ಸ್ವಲ್ಪ ನಡುಗುತ್ತ ಆ ಕನ್ನಡಿಯನ್ನು ಸ್ವೀಕರಿಸಿತು.

"ಕನ್ನಡಿಯೆ, ಕನ್ನಡಿಯೆ, ದೀಪಾವಳಿಗೆ! ಛೆ, ಛೆ," ಎಂದು ಹರೀಂದ್ರನು ಗದ್ಗದ ಕಂಠದಿಂದ ತಡೆದು ತಡೆದು ನುಡಿದನು.

"ಏಕಾಗಬಾರದು ?"

ಹರೀಂದ್ರನು ಅವರ್ಣ್ಯವಾದ ಮುಖಮುದ್ರೆಯಿಂದ ಅವನನ್ನು ನೋಡಿದನು. "ಏಕಾಗಬಾರದು, ನೋಡು—ಅದರಲ್ಲಿ ಮುಖ ನೋಡಿಕೊ, ನಿನ್ನ ಮುಖ ನೋಡಿಕೊ! ನೋಡಿಕೊಳ್ಳಲಿಷ್ಟವುಂಟೆ? ಇಲ್ಲ, ನನಗಿಲ್ಲ, ಯಾರಿಗೂ ಆಗದು."

ಹೀಗೆ ಹೇಳುತ್ತ ಹೀರಾಚಂದನ ಮುಖಕ್ಕೆ ಕನ್ನಡಿಯನ್ನು ಹಿಡಿಯಲು ಅವನು ಬೆಚ್ಚಿದನು. ಹಾಗೆಯೇ ಸಣ್ಣ ನಗುವನ್ನು ನಕ್ಕು, "ಇನ್ನೂ ಭಾರಿಯಾದ ಉಡುಗೊರೆಯಾಗಬೇಕೇನೊ," ಎಂದನು.

ಹರೀಂದ್ರನು, "ದೀಪಾವಳಿ ಉಡುಗೊರೆಯನ್ನು ಕೇಳಿದರೆ ಈ ಹೊಲೆಗನ್ನಡಿಯನ್ನು ತೋರಿಸುವೆಯಾ? ವರ್ಷಗಳ ಪಾಪಕೃತ್ಯಗಳ ನೆನಪನ್ನು ಚಿತ್ರಿಸಿಕೊಂಡು

ಆಲೋಕಿಸುವ ಸರ್ವಸಾಕ್ಷಿಯಾದ ಈ ಹೊಲಿಗನ್ನಡಿಯನ್ನು. ನಿನ್ನ ಮನಸ್ಸು ಹೇಗೆ ಒಪ್ಪಿತು? ಏನಾದರೂ ಯೋಚನೆ ಮನಸ್ಸಿನಲ್ಲಿ ಮೂಡಿತೆ? ಹೇಳು, ಹೇಳಿದರೆ ಉತ್ತಮ. ನನಗೂ ಏನೇನೋ ಕಲ್ಪನೆಗಳು ಹೊಳೆಯುತ್ತಿವೆ, ನೀನು ಬಹು ಉದಾರಿಯೆಂದು."

ವ್ಯಾಪಾರಿಯು ಹಾಗೆಯೇ ನೋಡಿದನು. ಹರೀಂದ್ರನು ನಗುತ್ತಿರಲಿಲ್ಲ. ಅವನ ಮುಖವಲ್ಲಿ ಯಾವುದೊ ಆಶೆ ಎದ್ದು ಕಾಣಿಸಿತು. ಸಂತೋಷವಲ್ಲ.

"ಏನನ್ನು ಚಿಂತಿಸುತ್ತಿರುವೆ?" ಎಂದು ವ್ಯಾಪಾರಿಯು ಕೇಳಿದನು.

"ಉದಾರಿಯಲ್ಲವೆ? ಸತ್ಯಾತ್ಮನಲ್ಲವೆ? ನಿಸ್ಪೃಹನಲ್ಲವೆ? ಪ್ರೇಮಿಯಲ್ಲವೆ? ಹಣಕ್ಕೆ ಬಾಯಿಬಿಟ್ಟು ದುಡ್ಡಿನ ಬೊಕ್ಕಸವಾಗುವುದೆ? ಅಷ್ಟೇನೆ ಬಾಳುವೆಯ ಆದರ್ಶ? ವಿಧಿಯೆ, ಮನುಷ್ಯನ ಜೀವಾಳ ಅಷ್ಟೇನೆ? ಹೇಳು" ಎಂದು ದುಃಖದಾಳದಿಂದ ಆವೇಶಪೂರಿತನಾಗಿ ನುಡಿದನು.

"ಹೇಳುವೆನು," ಎಂದು ವ್ಯಾಪಾರಿ ಔಡುಗಚ್ಚುತ್ತ ನುಡಿದು, ನಸುನಗುತ್ತ, "ಆದರೆ ಇದೇನೊ ಪ್ರಣಯಾತುರನ ಮಾತಿನಂತೆ ಕಾಣುತ್ತದೆ. ನಿನ್ನ ಪ್ರೇಯಸಿಯನ್ನು ನೆನೆಯುತ್ತಿರುವೆಯೊ?" ಎಂದನು.

"ಆಹ, ನೀನು ಪ್ರಣಯದ ರುಚಿಯನ್ನು ಮನಗಂಡಿರುವೆಯಾ? ಅವರ ರೀತಿಯೇನು?"

"ನಾನು, ನಾನು ಪ್ರಣಯದ ರುಚಿ ಕಂಡಿರುವುದು, ಬಿಟ್ಟಿರುವುದು; ಈ ಅರ್ಥವಿಲ್ಲದ ಬಿನ್ನಾಣದ ಮಾತುಗಳಿಗೆ

ನನಗೆ ಸಮಯವಿಲ್ಲ. ನೀನು ಆ ಕನ್ನಡಿಯನ್ನು ಕೊಳ್ಳುವೆಯೊ ಇಲ್ಲವೋ ?"

"ಆತುರವೇಕೆ? ಹೀಗೆಯೇ ಸ್ವಲ್ಪ ಹೊತ್ತು ಮಾತನಾಡೋಣ. ಬಾಳು ನಶ್ವರ. ಭದ್ರವಿಲ್ಲದುದು. ನಾನು ಸೊಗಸನ್ನು ಹೀಯಾಳಿಸಿ ಜಾರಿಕೊಳ್ಳಲಾರೆ. ಇಲ್ಲ. ಈ ಸಣ್ಣ ಸೊಗಸನ್ನು ಕೂಡ ನಾನು ತೊರೆಯಲಾರೆ. ಕಡಿದಾದ ಗಿರಿ ಶಿಖರದಲ್ಲಿ ತೊಳಲುವವನು ಆಸರೆಯನ್ನು ಪಟ್ಟಾಗಿ ಹಿಡಿಯುವಂತೆ ಎಷ್ಟು ಅಲ್ಪವಾದ ನಲವು ದಕ್ಕಿದರೆ ಅದನ್ನು ಪೂರ್ತಿಯಾಗಿ ಅನುಭವಿಸಬೇಕು. ಮಾನವರ ಬಾಳು ಕ್ಷಣಕ್ಷಣಕ್ಕೂ ಎತ್ತರದ ಶಿಖರದ ಮೇಲೆ ನಿಂತಂತೆ. ಆಯತಪ್ಪಿ ಅಲ್ಲಿಂದ ಬಿದ್ದರೆ ಮಾನುಷದ ಗುರುತು ಸ್ವಲ್ಪವೂ ಇಲ್ಲದಂತೆ ಕರಗಿ ಹೋಗುವುದು. ಆದುದರಿಂದ ಸೊಗಸಿನ ಮಾತುಕತೆ ನಡೆಸಬೇಕು. ಅವೇ ಹಿತಕರವು. ನಮ್ಮ ನಮ್ಮ ವಿಚಾರ ಮಾತನಾಡಿಕೊಳ್ಳೋಣ. ಈ ನಮ್ಮ ವೇಷಗಳೇಕೆ? ಬೇಕಾದರೆ ರಹಸ್ಯವಾಗಿಯೇ ಮಾತನಾಡೋಣ. ಯಾರು ಬಲ್ಲರು? ಇಬ್ಬರೂ ಗೆಳೆಯರಾಗಬಹುದು."

"ಒಂದೇ ಮಾತು. ವ್ಯಾಪಾರ ಮುಗಿಸಿಕೊಂಡು ಅಂಗಡಿ ಬಿಟ್ಟು ಹೊರಡು."

"ನಿಜ, ನಿಜ. ಸಾಕು ಹರಟೆ. ಇನ್ನು ಬಂದ ಕೆಲಸ. ಕನ್ನಡಿಬೇಡ. ಇನ್ನೇನಾದರೂ ತೋರಿಸು."

ಹೀರಾಚಂದನು ಕನ್ನಡಿಯನ್ನು ಇಟ್ಟಿದ್ದ ಕಡೆಯಲ್ಲಿ ಇಡಲು ಬಾಗಿದನು. ಬಾಗಿದಾಗ ಅವನ ಕಣ್ಣುಗಳ

ೀಲೆ ಮುಂಗುರುಳು ಬಿದ್ದಿತು. ಹರೀಂದ್ರನು ತನ್ನ
ಗಳನ್ನು ಜೇಬಿನೊಳಕ್ಕೆ ಇಳಿಯಬಿಟ್ಟು ಮುನ್ನುಗ್ಗಿ
ು. ಅಧೀರನಾಗಿ ಒಮ್ಮೆ ಶ್ವಾಸವೆಳೆದನು. ಒಮ್ಮೆಲೆ
ಾವು ಭಾವಗಳು ಮುಖಕ್ಕೆ ನುಗ್ಗಿ ಹೊಯ್ದಾಡಿದುವು.
ನರ್ಾನ, ಅಳುಕು, ಚಾಪಲ್ಯ, ತಡೆ, ಭಯ, ಭಯಾ
; ಹೃದಯ ವೇದನೆಯನ್ನು ತುಟಿಗಳ ವಿಕಾರವೂ,
ನುಗುವ ದಂತ ಪಙ್ತಿಯೂ ಸೂಚಿಸಿದುವು.

ಹೀರಾಚಂದನು, "ಇದು ಆಗಬಹುದಲ್ಲವೆ? ಎಂದು
ಂಡು ಏಳುವಷ್ಟರಲ್ಲಿಯೆ, ಹಿಂದಿನಿಂದ ಹರೀಂದ್ರನು
ನ ಮೇಲೆ ಬಿದ್ದನು. ನೀಳವಾದ ಕಠಾರಿಯು ಅರೆ
ಕಿನಲ್ಲಿ ಹೊಳೆಯುತ್ತ ತೂರಿತು. ವ್ಯಾಪಾರಿಯು
ಳುತ್ತ ಕೆನ್ನೆಯನ್ನು ಬೀರುವಿನ ಮೂಲೆಗೆ ಒಡಿದು
ಕ್ಕೆ ಉರುಳಿದನು.

ಅಂಗಡಿಯಲ್ಲಿ ಸ್ಫುಟಾಸ್ಫುಟ ಶಬ್ದ ಸಮ್ಮೇಳನವೇ
ಹೋಯಿತು. ಅಂಗಡಿಯ ಮುಂದೆ ಒಬ್ಬ ಹುಡು
ಓಡಾಟವು ಸಣ್ಣ ಶಬ್ದಗಳನ್ನು ಮೀರಿ ಹರೀಂದ್ರ
ನ್ನು ಬಾಹ್ಯ ಪ್ರಪಂಚಕ್ಕೆ ತಂದಿತು. ಸುತ್ತಲೂ ಭರ
ದ ನೋಡಿದನು. ಹಣದ ಪೆಟಾರಿಯ ಬಳಿಯಿದ್ದ
ಂಕು ಮಂಕಾದ ಮೇಣದ ಬತ್ತಿಯ ಉರಿಯು ಕ್ಷಾಮ
ಲದಲ್ಲಿ ಅಂಕುರವಾದ ಆಶೆಯಂತಿತ್ತು. ಅದರ
ಸ್ಪಷ್ಟವಾದ ತೊನೆದಾಟದಿಂದ ಬಿದ್ದ ನೀಳವಾದ
ಳುಗಳೂ ತೊನೆದಾಡುತ್ತಿದ್ದುವು. ನಿಶ್ವಾಸೋಚ್ಛ್ವಾಸ
ಂತೆ ಅಸ್ಪಷ್ಟವಾದ ಕತ್ತಲಿನ ಚೂರುಗಳು ಹೆಚ್ಚುತ್ತ
ಗುತ್ತ ಇದ್ದುವು. ಅಲ್ಲಿನ ಚಿತ್ರಗಳೂ ಚೈನಾ ಬೊಂಬೆ

ಗಳೂ ಆ ಅರೆಗತ್ತಲಿನಲ್ಲಿ ಜಲಲಿಪಿಯಂತೆ ಕರಗಿ ಅರೆ ಬೆಳಕಿನಲ್ಲಿ ಹೊಳೆಯುತ್ತಿದ್ದುವು. ಅಂಗಡಿಯಲ್ಲಿನ ನೆರಳು ಗಳ ಮುತ್ತಿಗೆಯನ್ನೇ ಬೆರಳಿಟ್ಟು ತೋರುವಂತೆ ಹಾರ ತೆರೆದಿದ್ದ ಒಳಬಾಗಿಲು ನೋಡುತ್ತಿತ್ತು.

ಹರೀಂದ್ರನ ಕಣ್ಣು ಶವದ ಕಡೆ ಹೊರಳಿತು. ಆ ದೇಹವು ಬಾಳಿನಲ್ಲಿದ್ದುದಕ್ಕಿಂತ ಹೊಲಸಾಗಿ ಸಾವಿನಲ್ಲಿ ಮುದುರಿಕೊಂಡಿತ್ತು. ಆ ಕಾರ್ಪಣ್ಯ ಸ್ಥಿತಿಯಲ್ಲಿ ವ್ಯಾಪಾರಿಯು ಹಿಡಿಪುಡಿಯಂತೆ ಬಿದ್ದಿದ್ದನು. ಅದನ್ನು ಹರೀಂದ್ರನು ನೋಡಲಾರದಾದನು. ಆ ಶೂನ್ಯತೆಯೂ ರಕ್ತದ ಕಾಲುವೆಯೂ, ಅಲೌಕಿಕವಾದ ಮಾತುಗಾರಿಕೆಯನ್ನು ಪಡೆದಂತಿದ್ದುವು. ಹರೀಂದ್ರನ ಕಣ್ಣು ಕತ್ತಲಿಟ್ಟಿತು.

ಆ ಕಳೇಬರವು ಅಲ್ಲಿಯೇ ಬಿದ್ದಿರಬೇಕು. ಆ ಕುಹಕ ಮಾನವ ಯಂತ್ರವನ್ನು ಇನ್ನು ಯಾರೂ ನಡೆಸಲಾರರು. ಇತರರ ಕಣ್ಣು ಬೀಳುವವರೆಗೆ ಅದು ಅಲ್ಲಿಯೇ ಬಿದ್ದಿರಬೇಕು. ಆಮೇಲೆ? ಕಂಡಮೇಲೆ? ಮೃತನ ಮಾಂಸವು ಎಚ್ಚೆತ್ತು ಉಚ್ಚ ಕಂಠದಲ್ಲಿ ನಾಡಿನಲ್ಲೆಲ್ಲ ಘೋಷಿಸುವುದು. ವಿಶ್ವವನ್ನೇ ಅನ್ವೇಷಣದ ದನಿಮಾರ್ದನಿಗಳಿಂದ ತುಂಬುವುದು. ಆಹ, ಮೃತವಾಗಿದ್ದರೂ ಈ ರಾಶಿಯು ಇನ್ನೂ ತನಗೆ ಶತ್ರುವೆ!

ದೇಗುಲದ ಘಂಟಾನಾದದಂತೆ ಬೀದಿಯ ಗಲಿಬಿಲಿಯೂ ಗಡಿಯಾರಗಳ ಶಬ್ದಗಳೂ ಸೇರಿ ಒಂದರಲ್ಲೊಂದು ಲಯವಾಯಿತು. ಅಷ್ಟು ಶಬ್ದವು ಅವನನ್ನು ಅವಾಕ್ಕಾಗಿಮಾಡಿತು. ಚಲಿಸಲು ಅನುವಾದನು. ಮೇಣದ ಬತ್ತಿಯ ಉರಿನಾಲಗೆಯೊಡನೆ ಸರಸವಾಡುತ್ತ

ಇದ್ದ ನೆರಳುಗಳು ಅವನನ್ನು ಮುತ್ತಿದುವು. ಕನ್ನಡಿಗಳಲ್ಲಿ ಪ್ರತಿಬಿಂಬಿತನಾಗಿ, ಅವನ ಆತ್ಮವು ಚೀರುವಂತಾಯಿತು. ತೂಗುಹಾಕಿದ್ದ ದೊಡ್ಡ ದೊಡ್ಡ ಕನ್ನಡಿಗಳಲ್ಲಿ ಬಾರಿ ಬಾರಿಗೂ ತನ್ನ ದರ್ಶನವಾಗಿ, ಸುತ್ತ ಅಡಗಿರುವ ಗೂಢಚಾರರೆಂದು ತಿಳಿದನು. ತನ್ನ ಕಣ್ಣುಗಳೇ ತನ್ನನ್ನು, ತನ್ನ ಹೊಲೆಗೆಲಸವನ್ನು ಕಂಡು ಹಿಡಿಯುವಂತಾಯಿತು. ಮೆಲ್ಲನೆ ತಾನಿಡುತ್ತಿದ್ದ ಹೆಜ್ಜೆ ಸದ್ದೂ ಸುತ್ತಿನ ಶಾಂತಿಯನ್ನು ಕೊಲ್ಲುತ್ತಿತ್ತು. ತನ್ನ ಕಾರ್ಯಕ್ಕೆ ಇನ್ನೂ ಗುಟ್ಟಾದ ಹೊತ್ತನ್ನು ಹೊಂಚಬೇಕಾಗಿತ್ತು. ತಾನು ದೂರದಲ್ಲಿದ್ದು ಇನ್ನಾರ ಕೈಲಾದರೂ ಮಾಡಿಸಬೇಕಾಗಿತ್ತು. ಇನ್ನೂ ಧೈರ್ಯಮಾಡಿ ಸೇವಕನನ್ನೂ ಕೊಲ್ಲಬೇಕಾಗಿತ್ತು. ಕಠಾರಿಯನ್ನು ಉಪಯೋಗಿಸದೆ ವ್ಯಾಪಾರಿಯನ್ನು ಬಂಧಿಸಿ ಬಾಯಿಗೆ ಬಟ್ಟೆಯನ್ನು ಗಿಡಿದು, ತನ್ನ ಕಾರ್ಯ ಸಾಧನೆಮಾಡಿಕೊಳ್ಳಬೇಕಾಗಿತ್ತು. ಈ ರೀತಿ ಯೋಚಿಸುತ್ತ ಮಾಡಿದುದಕ್ಕೆ ಚಿಂತಿಸಿದನು. ಒಂದು ಕಡೆ ಪಶ್ಚಾತ್ತಾಪ, ಇನ್ನೊಂದು ಕಡೆ ಆಗಿ ಹೋದುದನ್ನೂ ಆಗಿಸದಿರಲಾದೀತೇ ಎಂಬ ಆಶೆ, ಆತುರ. ಈ ಮಧ್ಯೆ ಅಟ್ಟದ ಮೇಲಿನ ಇಲಿಗಳಂತೆ ಚಲಿಸುವ ಭಯ.

ಮನಸ್ಸಿನ ಮೂಲೆ ಮೂಲೆಯೂ ರಣರಂಗವಾಯಿತು. ಪೋಲೀಸಿನವರ ಪಟ್ಟು ತನ್ನ ಕೈ ರಟ್ಟೆಯನ್ನು ಹಿಡಿಯುವುದು. ತಾನು ಗಾಳಕ್ಕೆ ಸಿಕ್ಕಿದ ಮೀನಾಗುವನು; ಅಥವಾ ಮುನ್ನೋಡಿದನು, ಕೈ ಕೋಳದಿಂದ ಬೀದಿಯಲ್ಲಿ ಮೆರವಣಿಗೆಯಾಗುವುದು; ನ್ಯಾಯಸ್ಥಾನದಲ್ಲಿ ಅಪರಾಧಿ,

ಸೆರೆಮನೆ—ಗಲ್ಲಿಗೇರಿಸುವುದು—ಕರಾಳವಾದ ಶ್ಮಶಾನ— ಬೇಯುವ ಆತ್ಮಕ್ಕೆ ಶಾಂತಿ.

ಹಾದಿ ಹೋಕರ ತಿರುಗಾಟವು ಅವನ ಮನಸ್ಸಿನಲ್ಲಿ ಮುತ್ತುವ ಪಡೆಯಂತೆ ಭಾಸವಾಯಿತು. ಅಂಗಡಿಯಲ್ಲಿ ನಡೆದುದು ಅವರಿಗೆ ಕೇಳಿಸಿತೇನೋ, ಅದರಿಂದ ಅವರ ಕುತೂಹಲವು ಕೆರಳಿತೇನೋ ಎಂದು ಹೆದರಿದನು. ಜಾರಿ ಹೋಗುತ್ತಿರುವ ಯುಗ ಯುಗಗಳಂತಿರುವ ಕ್ಷಣಗಳು ಅವನನ್ನು ನೇಣುಹಾಕುವ ಹಗ್ಗವನ್ನು ಸಮೆಯುವಂತೆ ಕಂಡಿತು. ಅಂಗಡಿಯ ಗಡಿಯಾರಗಳ ಸಿನಾದವನ್ನು ಕೇಳಿ, ಎಲ್ಲವನ್ನೂ ನಿಲ್ಲಿಸಿಬಿಡಲೇ ಎನ್ನಿಸುತ್ತಿತ್ತು. ಭಯದ ನಡುವೆ ಶಾಂತಿ ಇಣಿಕಿದರೂ-ಆ ಬಿಡುವು ಭಯವನ್ನು ಹೆಚ್ಚಿಸುತ್ತಿತ್ತು. ಅಂತರಂಗಕ್ಕೆ ಗೆಲವಿನ ಸೋಗುಹಾಕಿ ಮನೆಯ ಯಜಮಾನನಂತೆ ರಾಜಾರೋಷಾಗಿ ಶತಪಥ ನಡೆಯಲೆತ್ನಿಸಿದನು.

ಅವನ ಮನಸ್ಸು ಇಬ್ಬಗೆಯಾಗಿ ಸೀಳಿಹೋಯಿತು. ಒಂದು ನಿಷ್ಕಾಪಟ್ಯವನ್ನು ಅದುಮಿ ಕೃತ್ರಿಮವನ್ನು ತೋರಿದರೆ ಇನ್ನೊಂದು ಹುಚ್ಚಿನ ಕಡೆಗೆ ಹೊರಳುತ್ತಿತ್ತು. ಯಾವುದೋ ಭ್ರಾಂತಿ ಅವನ ನಂಬಿಕೆಯನ್ನು ಸುಲಭವಾಗಿ ಸೆರೆಹಿಡಿದಿತ್ತು. ಗುಮಾನಿಯಿಂದೆಲ್ಲಿ ಗುಟ್ಟು ರಟ್ಟಾಗುವುದೊ ಎಂದು ನಡುಗಿದನು. ಮೃತನ ಸೇವಕನು ಹರ್ಷಚಿತ್ತದಿಂದ ಹೊರಕ್ಕೆ ಹೋಗಿದ್ದುದನ್ನು ತಾನೇ ಕಂಡಿದ್ದನು. ಈಗ ತಾನು ಒಂಟಿಯಾಗಿ, ಅಂಗಡಿಯ ಶೂನ್ಯವಾತಾವರಣದಲ್ಲಿ ಮೆಲ್ಲನೆ ಹೆಜ್ಜೆಯಿಟ್ಟನು. ತನ್ನ ಹೆಜ್ಜೆಯ ದನಿ ತನ್ನದಲ್ಲವೆಂಬ

ಭ್ರಾಂತಿ. ಇನ್ನಾರೋ ನಡೆದು ಬರುತ್ತಿರಬಹುದೆಂಬ ಭ್ರಾಂತಿ. ಅಂಗಡಿಯ ಒಂದೊಂದು ಮೂಲೆಗೂ ಅವನ ಮನಸ್ಸು ಓಡಿತು. ಯಾರೂ ಇಲ್ಲ. ರೂಪಿಲ್ಲದ ವಸ್ತು. ಯಾವುದೋ? ಆದರೂ ತನಗೆ ನೋಡಲು ಕಣ್ಣುಂಟು. ಆವರದು ತನ್ನ ನೆರಳೆ. ಒಂದು ವೇಳೆ ಸತ್ತ ವ್ಯಾಪಾರಿಯ ರೂಪು, ಸೇಡಿನಿಂದ ಮತ್ತು ಕಪಟದಿಂದ ಸ್ಫೂರ್ತಿಗೊಂಡು ಛಾಯಾರೂಪಿಯಾಗಿ ಬಂದರೆ?

ಇದ್ದಕ್ಕಿದ್ದಂತೆಯೆ ಹೊರಗಡೆ ಬಾಗಿಲ ಬಳಿ ವ್ಯಾಪಾರಿಯ ಹೆಸರನ್ನು ಕೂಗುತ್ತ ಯಾರೋ ಬೆತ್ತದಿಂದ ಹೊಸ್ತಿಲ ಮೇಲೆ ಬಡಿಯುವುದು ಕೇಳಿಸಿತು. ಹರೀಂದ್ರನಿಗೆ ಸುತ್ತಲೂ ಮಂಜಿನಗಡ್ಡೆ ಒತ್ತಿ ಬಂದಂತಾಯಿತು. ಧಮನಿಯಲ್ಲಿ ಹರಿಯುವ ರಕ್ತ ಹೆಪ್ಪುಗಟ್ಟುವಂತಾಗಲು ಬಸವಳಿದನು. ಪ್ರಯಾಸದಿಂದ ಸತ್ತವನ ಕಡೆಗೆ ನೋಡಿದನು. ಅವನೇಳಲಿಲ್ಲ, ಸದ್ದಿಲ್ಲದೆ ಬಿದ್ದಿದ್ದನು. ಶಬ್ದಾತೀತನಾಗಿದ್ದನು. ಅವನ ಹೆಸರೀಗ ಶೂನ್ಯಮಯವಾಗಿದ್ದಿತು. ಹೊರಗೆ ಕೂಗಿಕೊಳ್ಳುತ್ತಿದ್ದವನು ಕೂಗಿ ಕೂಗಿ ಬೇಜಾರಾಗಿ ಇನ್ನು ಹೆಚ್ಚು ಹೊತ್ತು ನಿಲ್ಲದೆ ಹೊರಟುಹೋಗಿದ್ದನು.

ಇನ್ನೇನು ಹರೀಂದ್ರನಿಗೆ ತಾನು ಮಾಡಬೇಕಾಗಿದ್ದ ಕೆಲಸ ಸ್ಪಷ್ಟವಾಯಿತು. ಮೆಲ್ಲನೆ ಅಂಗಡಿಯಿಂದ ಜನದ ನೂಕುನುಗ್ಗಲಿಗೆ ಜಾರಿ, ಏನೂ ಅರಿಯದವನಂತೆ ಸುರಕ್ಷಣೆಯ ತೌರಾದ ನಿರ್ಮಲ ನಿಷ್ಕಪಟವಾದ ತನ್ನ ಸುಪ್ಪತ್ತಿಗೆಯಲ್ಲಿ ಎಲ್ಲವೂ ಮರೆತುಹೋಗುವಂತೆ ನಿದ್ರಿಸುವುದು. ಪುನಃ ಶಬ್ದ ಕೇಳಿಸಿತು. ಒಬ್ಬನು

ಒಳಕ್ಕೆ ಬರುವುದರಲ್ಲಿದ್ದನು. ಈಗ ಇನ್ನೊಬ್ಬನು ಮೊದಲಿನವನಿಗಿಂತ ಕೃದ್ಧನಾಗಿ ನೇರ ಒಳಕ್ಕೆ ಬರಬಹುದು. ಇನ್ನು ಕಾಲಹರಣ ಮಾಡಲಾಗದು. ಕರ್ಮವೆಸಗಿ ಆದರ ಫಲವನ್ನುಣ್ಣದಿದ್ದರೆ ಅದು ಹೇಸಿಗೆಯ ಸೋಲಿ! ಹಣವು ಅವನ ಆಶೆ. ಅದರ ಸಿದ್ಧಿಗೆ ಸಾಧನವು ಬೀಗದ ಕೈ.

ಬೀದಿಯ ಕಡೆಯೇ ನೋಡುತ್ತ ತನುವು ಕಂಪಿಸುತ್ತಿರಲು, ಹಿಂತೆಗೆಯುವ ಮನಸ್ಸಿನಿಂದ, ಹಾಗೆಯೇ ತನ್ನ ಬೇಟೆಯ ಬಳಿಗೆ ಬಂದನು.

ಜೀವವಾಗಲೇ ಹಾರಿಹೋಗಿತ್ತು. ಸೌದೆಯಂತೆ ದೇಹ ಬಿದ್ದಿತ್ತು. ದೃಷ್ಟಿಗೆ ಸುಮ್ಮನಿರುವ ವಸ್ತು ಸ್ಪರ್ಶಕ್ಕೂ ಸುಮ್ಮನಿರದೆ? ಅದರ ಭುಜವನ್ನು ಹಿಡಿದು ಬೋರಲು ಬಿದ್ದಿದ್ದುದನ್ನು ಸರಿಯಾಗಿ ಮಲಗಿಸಿದನು. ಕೈಕಾಲುಗಳು ಹೇಗೆ ಹೇಗೆ ಬಿಟ್ಟರೆ ಹಾಗೆ ಹಾಗೆಯೇ ಬೀಳುತ್ತಿದ್ದುವು. ಹೀಗಾಗಿ ವಿವಿಧ ವಿಪರೀತ ಭಂಗಿಗಳನ್ನು ಆ ದೇಹ ಪ್ರದರ್ಶಿಸುತ್ತಿತ್ತು. ಮುಖದಿಂದ ಭಾವ ನುಣ್ಚಿಕೊಂಡು ಹೋಗಿತ್ತು. ಮಯಣದಂತೆ ಪೇಲವವಾಗಿತ್ತು. ಕೆನ್ನೆಗಳ ಬಳಿ ಮಾತ್ರ ರಕ್ತ ಛಾಯೆ. ಅದೊಂದು ಆಗ್ಗ ಹರೀಂದ್ರನಿಗೆ ಒಗ್ಗದು. ಅದು—ಕಳೇಬರದಲ್ಲಿ ಹೆಪ್ಪು ಕಟ್ಟಿಕೊಂಡಿದ್ದ ರಕ್ತ—ಅವನನ್ನು ಜೀವನದ ಸುಗ್ಗಿಯ ಕಡೆ ಒಯ್ದಿತು. ಆ ದೃಶ್ಯ ಭ್ರಾಂತಿಮಯವಾಗಿ ಕಂಡಿತು. ಇನ್ನೊಮ್ಮೆ ಬಾಲ್ಯವು ಸುಳಿಯಿತು. ಜೀವಸ್ವರದ ಆಲಾಪನೆ ನಿಂತಂತಾಯಿತೆ ಎಂದುಕೊಂಡನು. ನೆನಪು ಮಹಾ ಪ್ರವಾಹದಂತೆ ನುಗ್ಗಿತು.

ಶಕ್ತಿ ಉಡುಗಿದಂತಾಯಿತು. ಶ್ವಾಸ ತಡೆದು ತಡೆದು ಬಂತು. ಕೈಕಾಲು ಕುಸಿಯಿತು. ಇವೆಲ್ಲವನ್ನೂ ಮೀರಿ ಅವನು ಶ್ಶಾಂತಿಯಿಂದ ಮೆರೆಯಬೇಕು.

ಮೃತನನ್ನು ದಿಟ್ಟಿಸುತ್ತ, ತಾನು ಮಾಡಿದುದನ್ನು ವಿವೇಚಿಸಿ, ಎಂತಹ ಘೋರ ಕೃತ್ಯವೆಂಬುವನ್ನು ಅಳಿಯ ಲೆತ್ನಿಸಿದನು. ಅಸುವನ್ನು ನೀಗಿದ್ದ ಮುಖವು ವಿವಿಧ ರಾಗಮಯವಾಗಿ ಕ್ಷಣ ಹಿಂದೆ ತನ್ನೊಡನೆ ನುಡಿಯು ತ್ತಿತ್ತು. ದೇಹವು ಸಚೇತನವಾಗಿತ್ತು. ಈಗ ತನ್ನೊಂದು ಕೃತ್ಯದಿಂದ ಆ ಬಾಳು ಮುಗಿಯಿತು. ಈ ರೀತಿ ವ್ಯರ್ಥ ತರ್ಕವನ್ನು ತರ್ಕಿಸಿದನು. ಪಶ್ಚಾತ್ತಾಪಕ್ಕೆ ಹೊರಳ ಲಿಲ್ಲ. ಕ್ಷಣ ಹಿಂದೆ ದುಷ್ಕೃತ್ಯವನ್ನು ನೆನೆದು ಕಂಪಿಸಿದ ಹೃದಯವು ಈಗ ನಿಮಿರಿತು. ಆದರೂ ವ್ಯರ್ಥಜೀವನ ವನ್ನು ಬದುಕಿ ಜೀವನದ ಚೈತ್ರವನ್ನು ಕಾಣದವನ ಬಗ್ಗೆ ಕೊಂಚ ಮರುಕವನ್ನು ತೋರಿದನು. ಆದರೇನು?

ಬೀಗದ ಕೈ ಗೊಂಚಲು ಸಿಕ್ಕಿತು. ಮುತ್ತುತ್ತಿದ್ದ ಹತ್ಯಾಲೋಚನೆಗಳನ್ನು ಮನಸ್ಸಿನಿಂದ ದೂಡಿ, ಹಾರ ತೆಗೆದಿದ್ದ ಮುಂಬಾಗಿಲಿಗೆ ಹೋದನು. ಹೊರಗೆ ಕೊಂಚ ಕೊಂಚವಾಗಿ ಹನಿಯುವುದಕ್ಕೆ ಪ್ರಾರಂಭವಾಗಿತ್ತು. ಬಾಗಿಲ ಅಗಳಿ ಹಾಕಿ ಹಿಂತಿರುಗಿದನು. ಜನವಿಹೀನ ವಾದ ವಿಶಾಲಗೃಹದಂತೆ ಅಂಗಡಿಯು ಪ್ರತಿಧ್ವನಿಯನ್ನು ಕೊಡುತ್ತಿತ್ತು.

ಕತ್ತಲು ಕವಿಯುತ್ತ ಬಂದಿತು. ಎಡೆಬಿಡದ ಜಡಿ. ನಾನಾ ತೆರನ ಶಬ್ದಗಳು ಹರೀಂದ್ರನ ಕಿವಿಗಳನ್ನು ಬಿರಿ ದುವು. ನಡಿಗೆ, ಸಿಟ್ಟುಸಿರು, ದಾರಿಹೋಕರ ಗುಜು

ಗುಂಪಲು, ಗಲ್ಲಿಗಳಲ್ಲಿನ ದುಡ್ಡಿನೆಣಿಕೆ, ಬಾಗಿಲು ಕೀಲುಗಳ ಕೀರಲು ದನಿ. ಇನ್ನೇನು ಎಲ್ಲವೂ ಹುಚ್ಚು ಹಿಡಿಸಿದುವು: ಯಾವುದೋ ಅವ್ಯಕ್ತ ಸಾನ್ನಿಧ್ಯಗಳು ಕವಿದಂತೆ ಭಾಸವಾಯಿತು. ಮಹಡಿಯ ಮೇಲೆ ಹೆಜ್ಜೆಗಳ ಸುಳಿವು. ಮೃತನು ಎದ್ದು ಕುಳಿತುಕೊಳ್ಳುವಂತೆ ಶಬ್ದ. ಮಹಡಿ ಹತ್ತಲು ಎಷ್ಟು ಪ್ರಯತ್ನಿಸಿದರೂ ಕಾಲು ಬರದು. ತಾನು ಕಿವುಡನಾದರೂ ಆಗಿದ್ದಿದ್ದರೆ ಸಮಾಧಾನಚಿತ್ತನಾಗಿರಬಹುದಾಗಿತ್ತು. ಚಿತ್ತಭ್ರಮಣೆಯಿಂದಲಾದರೂ ಒಮ್ಮೊಮ್ಮೆ ತಾನು ಪ್ರಕೃತಸ್ಥಿತಿಯನ್ನು ಮರೆಯಬಲ್ಲನೆಂದು ಸಂತೋಷ. ಇಪ್ಪತ್ತು ನಾಲ್ಕು ಮೆಟ್ಟಲು ಹತ್ತುವುದು ಇಪ್ಪತ್ತು ನಾಲ್ಕು ನರಕಗಳಲ್ಲಿ ಯಾತನೆಪಟ್ಟಂತಾಯಿತು.

ಕೊಲೆಪಾತಕರ ನೆನಪು. ದೇವದೂತರು ಅವರಿಗೆ ಕೊಡುವ ಶಿಕ್ಷೆ. ಎಲ್ಲವೂ ಸ್ಮೃತಿಪಥವಲ್ಲಿ ಸುಳಿದುವು. ಋತ ನಿಯಮವನ್ನು ನೆನೆದು ನಡುಗುತ್ತ ತನ್ನ ಹೊಲೆಗೆಲಸವು ಆ ನಿಯಮದ ಅಪ್ರತಿಹತವಾದ ಶಿಕ್ಷೆಯಿಂದ ಪಾರಾಗದೆ? ಎಂದು ಯೋಚಿಸಲಾರಂಭಿಸಿದನು.

ಇದು ಅದೃಷ್ಟದ ಒಂದು ಮಾಟವೆ. ತನ್ನನ್ನು ನಡೆಸುವ ಅದೃಷ್ಟವನ್ನು ನಂಬಿ, ತಾನು ಅದರೊಡನೆ ಅಕ್ಷಮಾಡಿದವನು. ಅದೃಷ್ಟದಕಡೆಗೆ ದಾಳವುರುಳಿ ಈರೀತಿ ಬಿದ್ದವನು. ಗೋಡೆಗಳು ಗಾಜುಗಳಾಗಿ ತನ್ನ ಕೃತ್ಯವನ್ನು ಕಾಣಿಸಿಯಾವು. ತನ್ನ ಕಾಲ ಕೆಳಗಿನ ತೊಲೆಗಳು ಕುಸಿದು ತಾನು ಆಳುದ್ದದ ಕೊಚ್ಚೆಯಲ್ಲಿ ಸಿಕ್ಕಿಬೀಳುವಂತಾಗಬಹುದು. ಇವೆಲ್ಲಕ್ಕಿಂತ ಹಗುರವಾದ

ಸನ್ನಿವೇಶದಲ್ಲಿ ತಾನು ಸಿಕ್ಕಿದ್ದರೆ! ಆಗ ತನ್ನ ನಾಶವು ಸುಖವಾಗಿ ಜರುಗಿದ್ದರೆ ಮೇಲಾಗುತ್ತಿತ್ತು. ಮನೆಯೇ ತನ್ನ ಮೇಲೆ ಕುಸಿದುಬಿದ್ದು, ತನ್ನನ್ನೂ ಮಡಿದವನನ್ನೂ ಮುಚ್ಚಿಕೊಂಡರೂ. ಇದು ದೈವವೇ ಪಾಪ ಕೃತ್ಯದ ಮೇಲೆ ನಡೆಸುವ ದಾಳಿಯೆನ್ನಬಹುದು. ಮಾನವನ ನ್ಯಾಯಕ್ಕಿಂತ ಈ ಋತದ ನ್ಯಾಯವು ಎಷ್ಟೋ ಭಿನ್ನ. ಇದನ್ನು ಹರೀಂದ್ರನು ನಂಬುತ್ತಿದ್ದನು. ಮಾನವನಲ್ಲಿ ನ್ಯಾಯ ಸಿಕ್ಕದಿದ್ದರೂ ದೇವನಲ್ಲಿ ಸಿಕ್ಕೀತು.

ಮಹಡಿಯ ಮೇಲಿನ ಕೊಠಡಿಗೆ ಹೋದನು. ಒಡನೆ ಬಾಗಿಲನ್ನು ಹಾಕಿಕೊಂಡನು. ಅಲ್ಲಿನ ಅಲಂಕಾರವನ್ನು ಕಂಡು ತಾನು ರಂಗಭೂಮಿಯ ಮೇಲೆ ನಟಿಸಲು ಬಂದ ನಟನಂತೆ ಭಾವಿಸಿದನು. ಕಣ್ಣಲ್ಲಿ ಕಣ್ಣಿಟ್ಟು ಪೆಟ್ಟಿಗೆಯನ್ನು ಪರೀಕ್ಷಿಸಿದನು. ಮನಸ್ಸಿಗೆ ಸ್ವಲ್ಪ ಸ್ವಲ್ಪವಾಗಿ ಶಾಂತಿಬರುತ್ತಿತ್ತು. ಹೊರಗೆ ಮಳೆ ಸುರಿಯುತ್ತಿದ್ದಾಗ್ಯೂ ಬೇಸರವಾಗಲಿಲ್ಲ. ಜೊತೆಗೆ ಸಂಗೀತವೊಂದು ಸುಶ್ರಾವ್ಯವಾಗಿ ಕೇಳಿಸಿತು. ಬೀಗದ ಕೈ ಹುಡುಕುತ್ತ ಸಂಗೀತವನ್ನು ಆಲಿಸಿದನು. ಮನದಲ್ಲಿ ಮಧುರ ಆದರ್ಶಗಳು, ರೂಪಗಳು ಮುತ್ತಿಕೊಂಡವು.

ಹೀಗೆ ಕಾರ್ಯೋದ್ಯುಕ್ತನಾಗಿದ್ದಾಗ ಇದ್ದಕ್ಕಿದ್ದಂತೆ ಬೆಚ್ಚಿದನು. ಮಂಜಿನ ತಂಪು, ತೇಜಸ್ಸಿನ ಹೊಳಪು, ರಕ್ತದ ಚಿಮ್ಮು, ಎಲ್ಲ ತನ್ನ ದೇಹದಲ್ಲಿ ಹುಟ್ಟಿದಂತಾಯಿತು. ನಡುಗುತ್ತ ನಿಸ್ತೇಜನಾಗಿ ನಿಂತುಬಿಟ್ಟನು. ಯಾರೋ ಮಹಡಿ ಹತ್ತುತ್ತಿದ್ದಂತೆ ಇತ್ತು. ಸ್ವಲ್ಪ ಹೊತ್ತಿನಲ್ಲಿ ಅಗಳಿ ಸಡಲಿ ವ್ಯಕ್ತಿಯೊಂದು ಒಳಕ್ಕೆ ಬಂದಿತು.

ಹರೀಂದ್ರನು ಭಯಗ್ರಸ್ತನಾದನು. ಏನು ವಿಪತ್ತು ಸಂಭವಿಸುವುದೋ ಎಂದು ಊಹಿಸಲಾರದಾದನು. ಸತ್ತವನು ಬದುಕಿದನೋ; ಮಾನವ ನ್ಯಾಯವನ್ನುಸುರುವ ಅಧಿಕಾರಿಯೋ; ಇಲ್ಲ ತನ್ನನ್ನು ನೇಣಿನ ಗುರಿಗೆ ಒಯ್ಯುವ ಇನ್ನಾವ ವ್ಯಕ್ತಿಯೋ; ಆ ವ್ಯಕ್ತಿಯು ಒಳಕ್ಕೆ ತಲೆಹಾಕಿ, ತನ್ನನ್ನು ನೋಡಿ ಸ್ನೇಹಭಾವದಿಂದ ನಕ್ಕು ಹಿಂತಿರುಗಿದಾಗ, ಭಯವು ತಡೆಯಲಾರದಾಗಿ ಚೀರಿದನು. ಆ ದನಿಗೇಳಿ ಆ ವ್ಯಕ್ತಿ ಪುನಃ ಒಳಕ್ಕೆ ಬಂದಿತು.

"ನನ್ನನ್ನು ಕರೆದೆಯಾ?" ಎಂದು ಕೇಳುತ್ತ ಬಂದವನು ಒಳಹೊಕ್ಕು ಬಾಗಿಲು ಮುಚ್ಚಿದನು.

ಹರೀಂದ್ರನು ಬಿಟ್ಟ ಕಣ್ಣಿನಿಂದ ಅವನನ್ನೇ ನೋಡಿದನು. ತನ್ನ ಕಣ್ಣಿನಲ್ಲಿ ಪರೆಯಿದ್ದಿತೇನೋ? ಬಂದವನ ರೂಪು ಅಂಗಡಿಯಲ್ಲಿ ಮೇಣದ ಬತ್ತಿಯ ಉರಿಯಲ್ಲಿ ಹರಿದಾಡುತ್ತಿದ್ದ ನೆರಳುಗಳಂತೆ ಮಾರ್ಪಡುತ್ತಿತ್ತು. ಒಂದೊಂದು ಸಲ ಅವನು ತನಗೆ ತಿಳಿದಂತಿದ್ದನು. ಒಮ್ಮೊಮ್ಮೆ ಅವನು ತನ್ನ ಪ್ರತಿಬಿಂಬದಂತಿದ್ದನು. ಭಯಾನಕವೇ ಮೈವೆತ್ತಂತಿದ್ದು ಆ ರೂಪು ಇಳೆಯದೂ ಅಲ್ಲ, ದೈವ ಪ್ರೇಷಿತವೂ ಅಲ್ಲ ಎನ್ನುವಂತಿತ್ತು.

ಆದರೂ ಬಂದವನು ಜೀವಂತವಾಗಿ ಕಂಡುಬಂದು ಹರೀಂದ್ರನನ್ನು ನೋಡಿ ನಗುತ್ತಿದ್ದನು. "ಹಣವನ್ನು ಹುಡುಕುತ್ತಿರುವೆಯಲ್ಲವೆ?" ಎಂದವನು ನುಡಿದುದು ಪ್ರತಿಸತ್ಯದ ಬಳಕೆಯ ಮಾತಾಗಿತ್ತು.

ಹರೀಂದ್ರನು ಮರು ನುಡಿಯಲಿಲ್ಲ.

"ಎಚ್ಚರಿಕೆ, ಸೇವಕನು ಹೊರಕ್ಕೆ ಹೋಗಿರುವನು.

ಎಂದಿಗಿಂತ ಒಂದು ವೇಳೆ ಮುಂಚೆ ಬಂದು, ಹರೀಂದ್ರ ನಿಲ್ಲಿರುವುದನ್ನು ಕಂಡರೆ ಮುಂದಿನ ಫಲವನ್ನು ನಾನು ಹೇಳಬೇಕಾಗಿಲ್ಲ."

"ಹಾಗಾದರೆ ನನ್ನನ್ನು ಬಲ್ಲಿ" ಎಂದು ಹರೀಂದ್ರನು ಕೇಳಿದನು.

ಬಂದವನು ನಕ್ಕು, "ಬಹುಕಾಲದಿಂದ ನೀನು ನನ್ನ ಪ್ರೀತಿಗೆ ಪಾತ್ರನಾಗಿದ್ದೆ. ನಿನಗೆ ನೆರವಾಗುವ ನಿರೀಕ್ಷೆ ಯಲ್ಲೇ ಇದ್ದೆ" ಎಂದನು.

"ಯಾರು ನೀನು? ಭೂತವೇ?"

"ನಾನಾರಾದರೂ ಇರಲಿ, ನಿನಗೆ ನೆರವಾಗುವುದರಲ್ಲಿ ಅದು ಅಡ್ಡಿಯಾಗದು."

"ಅಡ್ಡಿಯಾಗುವುದು ಖಂಡಿತ. ನಿನ್ನ ನೆರವೆ? ಛಿ, ಛಿ, ನೀನು ನನ್ನನ್ನು ಅರಿಯೆ; ನಿಜವಾಗಿಯೂ ಅರಿಯೆ."

"ಬಲ್ಲೆ, ನಿನ್ನ ತನುವಿನಿಂದ ಆತ್ಮನವರೆಗೂ ಕೂಲಂ ಕಷವಾಗಿ ಬಲ್ಲೆ." ಹೀಗೆ ನುಡಿದಾಗ ಬಂದವನ ದನಿ ಯಲ್ಲಿ ಘೋರಣೆಯೂ ಗಡುಸೂ ಇದ್ದುವು.

"ಬಲ್ಲೆಯಾ? ಅದಾರಿಗೆ ಸಾಧ್ಯ? ನನ್ನ ಬಾಳಿೊ ನೈಜವನ್ನು ಬೈತಿಟ್ಟ ಜವನಿಕೆಯಾಯಿತು. ನನ್ನ ಸಹಜ ಪ್ರವೃತ್ತಿಯನ್ನು ಸುಳ್ಳುಮಾಡಲು ನಾನು ಬದು ಕಿದೆ. ಈ ವಿಪರೀತದೋಷವು ಆತ್ಮಘಾತಕವಾದರೂ ಜನರು ಎಚ್ಚೆತ್ತುಕೊಳ್ಳರು. ವೀರ್ಯವಂತರಾದರೂ, ನೀತಿಗೆಟ್ಟು, ಪತಿತರಾಗಿ ಕೈಯಾರ ತಮ್ಮ ಗೋಮಾಳೆ ಯನ್ನು ತಾವೇ ಮಿಸುಕಿಕೊಳ್ಳುವರು. ಆತ್ಮಸಂಯಮ ವಿದ್ದಿದ್ದರೆ ಅವರ ಮುಖಭಂಗಿ ಬೇರೆ ಬಗೆಯಾಗಿರು

ತ್ರಿತ್ತು. ಅವರೂ ಋಷಿಗಳಂತೆ ಮೆರೆಯಬಹುದಾಗಿತ್ತು. ಅಯ್ಯೋ, ನಾನೆಂಥ ಹೀನ; ಕೈಮೀರಿ ಹೋಯಿತು. ನನಗೂ ದೇವನಿಗೂ ಮಾತ್ರ ಸಮಾಧಾನವು ಗೊತ್ತು. ಆದರೆ ಸಮಯವಿದ್ದಿದ್ದರೆ ನಾನು ಆತ್ಮಶೋಧನೆಮಾಡಿ ಕೊಂಡು ಆತ್ಮಚರಿತ್ರೆಯನ್ನು ಶ್ರುತಪಡಿಸಬಹುದು" ಎಂದನು.

"ನನಗೇ?"

"ಹೌದು, ಎಲ್ಲರಿಗಿಂತ ಮುಂಚೆ ನಿನಗೇ! ಕ್ಷಣ ಹಿಂದೆ ನೀನು ಧೀಮಂತನೆಂದೂ ಸರ್ವಜ್ಞನೆಂದೂ ಬಗೆ ದಿದ್ದೆ. ನಿನ್ನ ಇರವು ಸಂಶಯಾಸ್ಪದವಲ್ಲದಿರುವುದರಿಂದ ಮಾನವ ಹೃದಯ ವಿಮರ್ಶಕನೆಂದು ಬಗೆದೆ. ಆದರೂ ನೀನು ನನ್ನನ್ನು ನನ್ನ ಕ್ರಿಯೆಗಳಿಂದ ಅರಿಯಲಿರುವೆ. ಓಹೋ! ನನ್ನ ಕ್ರಿಯೆಗಳು—ನೀನು ನನ್ನನ್ನು ಕ್ರಿಯೆ ಗಳಿಂದ ಅರಿಯುವೆ! ಆದರೆ ನನ್ನ ಅಂತರಂಗಕ್ಕೆ ದೃಷ್ಟಿಯನ್ನು ಸುಳಿಯಿಸಲಾರೆಯಾ? ಪಾಪವನ್ನು ಹೇಸುವೆನೆಂದು ಕಾಣೆಯಾ? ನನ್ನ ಅಂತರಂಗದಲ್ಲಿ ಆತ್ಮಸಾಕ್ಷಿಯ ಲಿಖಿತವನ್ನು ಕಾಣೆಯಾ? ನಾನು ಅದನ್ನಾ ಗಾಗ್ಗೆ ಉಪೇಕ್ಷಿಸಿದ್ದರೂ ಮೂರ್ಖತನದ ಕುತರ್ಕವು ಈ ಬರೆಹವನ್ನು ಅಳಿಸಿಲ್ಲ. ಉದ್ದೇಶವಿಲ್ಲದ ಈ ಪಾಪಿ ಯಲ್ಲಿ, ಮಾನವತೆಗೆ ಸಹಜವಾದ ಒಂದು ಕ್ರಿಯೆಯಿಂದ, ನನ್ನ ಅಂತರಂಗವನ್ನು ಓದುವೆಯಾ?"

"ನೊಂದವನ ನುಡಿಗಳಿವು. ಆದರಿವು ನನ್ನನ್ನು ಲಕ್ಷಿಸವು. ನಿನ್ನ ಈ ವಾಙ್ಮಾಲವು ನನಗೆ ಹಿಡಿಸದು. ಕಾಲ ಜಾರುವುದು. ಸೇವಕನು ನಿದಾನಿಸಿಯಾನು.

ಆದರೂ ಬರುವನು. ಮೃತ್ಯುವೇ ಕ್ರಮೇಣ ನಿನ್ನ ಬಳಿಸಾರುವಂತಿದೆ. ಈಗ ನಿನಗೆ ನೆರವಾಗಲೆ? ನಾನೆಲ್ಲ ರಹಸ್ಯವನ್ನೂ ಅರಿತಿರುವೆನು. ಹಣವಿರುವ ತಾವನ್ನೂ ತೋರಿಸಲೆ?"

"ಪ್ರತಿ ಫಲ?" ಎಂದು ಹರೀಂದ್ರನು ಬೆಸಗೊಂಡನು.

"ದೀಪಾವಳಿಯ ಬಹುಮಾನವನ್ನು ಕೊಟ್ಟು ಬರಲು ನನ್ನ ಸೇವೆಯನ್ನು ಸಲ್ಲಿಸಿಕೊ."

ಹರೀಂದ್ರನು ವಿಜಯೋನ್ಮತ್ತನಂತೆ ಹುಸಿನಗುವನ್ನು ನಕ್ಕನು. "ಇಲ್ಲ, ಏನೂ ಬೇಡ. ಒಂದು ವೇಳೆ ಬಾಯಾರಿಕೆಯಿಂದ ಸಾಯಬೇಕಾದರೂ ನಿನ್ನ ಕೈ ನೀರನ್ನು ನಿರಾಕರಿಸುವ ಧೈರ್ಯ ನನಗೆ ಬರಲಿ. ಪಾಪ ಬದ್ಧನಾಗಲು ನಾನು ಏನೂ ಮಾಡೆ."

"ಮರಣೋನ್ಮುಖಿಯ ಪಶ್ಚಾತ್ತಾಪವು ನನಗೆ ಮೆಚ್ಚುಗೆಯೆ?"

"ಆ ಪಶ್ಚಾತ್ತಾಪವು ತೀರ ಅರ್ಥವಿಲ್ಲದುದೆಂದು ನೀನು ಬಲ್ಲೆ, ಅಲ್ಲದೆ ನೀನದನ್ನು ನಂಬುವುದಿಲ್ಲ."

"ನಾನು ಹಾಗೆ ಹೇಳುವುದಿಲ್ಲ. ನನ್ನದು ಬೇರೆ ದೃಷ್ಟಿ. ಮಾನವನ ಬಾಳು ಮುಗಿದ ಮೇಲೆ ನನ್ನ ಉತ್ಸುಕತೆ ಅಡಗುವುದು. ಅವನ ಬಾಳು ನನ್ನನ್ನು ಸೇವಿಸಲು; ನೀತಿಯ ಗೌರವರ್ಣಕ್ಕೆ ಕರಾಳದೃಷ್ಟಿಯನ್ನು ಬೆರೆಸುವುದು, ಗೋಧಿ ಬೆಳೆವ ಕ್ಷೇತ್ರದಲ್ಲಿ ಕಳೆಯನ್ನು ಬೆಳೆಸುವುದು, ಇವೆಲ್ಲ ಅವನು ನಿನ್ನಂತೆಯೆ ಆಶೆಗೆ ಸಿಕ್ಕಿ ಮಾಡುತ್ತಿರುವುದು. ಬಿಡುಗಡೆಗೆ ಸಾಗುತ್ತಿರುವಾಗ ಅವನು ಕೊನೆಯ ಸೇವೆಯನ್ನು ಸಲ್ಲಿಸ

ಬಹುದು. ನಾನೇನೂ ಕ್ರೂರನಾದ ಅರಸನಲ್ಲ. ಒಮ್ಮೆ ನನ್ನ ಅಂಕೆಗೆ ಅಧೀನನಾಗು. ನನ್ನ ನೆರವನ್ನು ಸ್ವೀಕರಿಸು. ಇಲ್ಲಿನವರೆಗೆ ಗೆಲವಿಂದ ಇದ್ದ ಹಾಗೆ ಇನ್ನು ಮುಂದೆಯೂ ಬಾಳಿನಲ್ಲಿ ಸುಖವಾಗಿರು. ಇನ್ನೂ ಹೆಚ್ಚು ಸಂತಸದಾಳು. ಇಹದಿಂದ ಪ್ರಸ್ಥಾನ ಸಮಯವೊದಗಿ, ಜೀವನದ ಸಂಜೆ ರಾತ್ರಿಯಾಗಿ ಸಮಾಪ್ತಿಯಾದಾಗ, ನಿನ್ನ ಅಂತರಂಗದ ವಿಪ್ಲವವನ್ನು ಆತ್ಮಸಾಕ್ಷಿಗೆ ಶ್ರುತಿ ಮಾಡಬಹುದು. ದೇವನಲ್ಲಿ ಅತುಳ ಶಾಂತಿಯನ್ನು ಬೇಡಬಹುದು. ಈಗತಾನೆ ಅಂತಹ ಮರಣ ಶಯ್ಯೆಯ ಬಳಿಯಿದ್ದು ಬಂದೆ. ಕೊರಡಿಯಲ್ಲಿ ಶ್ರದ್ಧೆಯಿಂದ ಸಾಯುವವನಿಗಾಗಿ ಅಳಲುತ್ತ, ಅವನ ಕೊನೆ ಮಾತುಗಳನ್ನು ಕೇಳುತ್ತ ಬಂಧುಗಳು ಕಣ್ಣೀರಿಡುತ್ತಿದ್ದರು. ಅವನ ಮುಖವನ್ನು ನೋಡಿದೆ. ಕಠೋರವಾಗಿದ್ದುದು ಆಶಿಯಿಂದ ಬೆಳಗಿತು."

"ನಾನೇನು ಅಂತಹ ಕ್ರಿಮಿಯೆ? ನನಗೇನು ಉನ್ನತವಾದ ಆಶಯಗಳಿಲ್ಲವೆ? ಪಾಪಕಾರ್ಯವೆಸಗುವುದು, ಕೊನೆಗೆ ಸ್ವರ್ಗಕ್ಕೆ ದೀನನಾಗಿ ಬೇಡಿ ಅಲ್ಲಿಗೆ ನುಣ್ಚಿಕೊಳ್ಳುವುದು. ಈ ಭಾವನೆಯ ನೆನಪೇ ನನ್ನ ಹೃದಯವನ್ನು ಕುದಿಸುವುದು. ಇದೇನೇ ನಿನ್ನ ಮಾನವ ಹೃದಯಾನುಭವವು? ಅಥವಾ ನನ್ನ ಕೈ ನೆತ್ತರಿನ ಕರೆಯಾಗಿರುವುದನ್ನು ಕಂಡು ನನ್ನಲ್ಲಿ ಆ ನೈಚ್ಯವನ್ನು ಕಂಡೆಯಾ! ಇಲ್ಲವೆ ಈ ನನ್ನ ಕೊಲೆಗೆಲಸವು ಇನ್ನು ಮುಂದೆಯೂ ನನ್ನ ಹೃದಯದಿಂದ ಸೌಜನ್ಯವನ್ನು ತಡೆಗಟ್ಟುವುದೇ?"

" ಕೊಲೆಯೇ ಪಾಪದ ಪರಾಕಾಷ್ಠತೆಯೆಂದು ನಾನು ಹೇಳುವುದಿಲ್ಲ. ಜೀವನವೇ ಸಂಗ್ರಾಮವಾಗಿರುವಂತೆ ಪಾಪಕಾರ್ಯಗಳೆಲ್ಲ ಕೊಲೆಗಳೆ. ಪಾಪವು ಕಾರ್ಯಕಾರಿಯಾದ ಮೇಲೂ ಪಾಪಿಯನ್ನು ನಾನು ಪರೀಕ್ಷಿಸುವೆನು. ಮರಣವೇ ಕೊನೆ. ನನ್ನ ಕಣ್ಣಿಗೆ ಪಾಪಕಾರ್ಯ ಮಾತ್ರ ಕಾಣಿಸುವುದೆಂದು ಹೇಳಿದೆನೆ? ಪುಣ್ಯವೂ ಕಾಣುವುದು. ಅವೆರಡೂ ಯಮದೂತನ ಖಡ್ಗದ್ವಯ. ಯಾವುದರ ಶೋಧನೆಗೆ ನಾನು ಬದುಕಿರುವೆನೋ ಆ ಪಾಪವು ಕಾರ್ಯದಲ್ಲಿಲ್ಲ. ಮಾಡುವವನಲ್ಲಿ. ಪಾಪಿಯು ನನಗೆ ಪ್ರಿಯನು. ಆದರೆ ಪಾಪಕಾರ್ಯವಲ್ಲ. ಮಹಾಶಬ್ದದಿಂದ ಹೊರಳುವ ಯುಗಯುಗಗಳ ಚಕ್ರಪರಿವರ್ತನವನ್ನು ಗಮನಿಸಿದರೆ ಅಪೂರ್ವ ಪುಣ್ಯಪುರುಷರಿಗಿಂತ ಪಾಪಿಗಳೇ ಉತ್ಕೃಷ್ಟರೆನ್ನಬೇಕು. ವ್ಯಾಪಾರಿಯನ್ನು ಕೊಂದೆಯೆಂದು ನಾನು ನಿನಗೆ ನೆರವಾಗುವುದಿಲ್ಲ. ನೀನು ಹರೀಂದ್ರನೆಂದು, ನೀನೀ ವಿಷಮಾವಸ್ಥೆಯಿಂದ ಪಾರಾಗಲು ನನ್ನ ನೆರ."

" ಹಾಗಾದರೆ ನನ್ನ ಹೃದಯವನ್ನು ನಿನಗೆ ಬಿಚ್ಚುವೆನು. ಇದೇ ನನ್ನ ಕೊನೆಯ ಹೊಲೆಗೆಲಸ. ಅದರ ಹಾದಿಯನ್ನು ತುಳಿದಾಗ ನೀತಿ ಕಲಿತೆ. ಕೊಲೆಯೇ ಮಹಾನೀತಿಯಾಯಿತು. ಇದುವರೆಗೆ ನಾನು ನನ್ನದಲ್ಲದ ಗುರಿಗೆ ಭರದಿಂದ ಅಟ್ಟಲ್ಪಟ್ಟೆ. ಕಾಂಚನಕ್ಕೆ ದಾಸನಾಗಿ ಕ್ಷತವಿಕ್ಷತನಾದೆ. ಈ ತೆರನಾದ ಚಾಪಲ್ಯಗಳನ್ನು ತಡೆಯಲು ಸಾತ್ವಿಕ ಸೌಜನ್ಯಗಳು ಮಾನವನಲ್ಲಿ ಇರಬೇಕು. ಆದರೆ ಅವು ನನ್ನಲ್ಲಿರಲಿಲ್ಲ. ಪ್ರೇಯೋಕಾಂಕ್ಷಿಯಾದೆ. ಈಗಿನ ನನ್ನ ಕಾರ್ಯದಿಂದ ನಾನು ಕೊಯ್ಯುವ ಬೆಳಸು

ಶ್ರೇಯಸ್ಸು; ನನ್ನ ನೈಜಪ್ರವೃತ್ತಿಯನ್ನು ಕಂಡುಕೊಳ್ಳುವ ಶ್ರದ್ಧೆ. ಬಾಳಿನ ರಂಗಭೂಮಿಯಲ್ಲಿ ವಿವಿಧ ರೀತಿಯಲ್ಲಿ ನಟನಾಗುವೆನು. ನನ್ನಲ್ಲಾದ ವ್ಯತ್ಯಾಸಗಳನ್ನು ಪರಿಶೀಲಿಸುವೆನು. ಈ ಕೈಗಳಿನ್ನು ಮಂಗಳವನ್ನೇ ಕುರಿಯುವುವು. ಇನ್ನು ಮುಂದೆ ಹೃದಯುವು ಶಾಂತಿಯು ತುಂಬಿನಿಂದಿರುವುದು. ಭೂತಕಾಲದಿಂದ ಯಾವುದೋ ಸಂದೇಶ ಕೇಳಿಸುತ್ತಿರುವುದು. ಕಳೆದ ಶುಭ ದಿನಗಳ ನನ್ನ ಉತ್ಸಾಹ, ಕನಸುಗಳು, ಉದಾತ್ತಭಾವ ಗ್ರಂಥಗಳ ಓದಿನಿಂದ ಸಹೃದಯನಾಗಿ ಹರಿಯಿಸಿದ ಕಂಬನಿ, ರಸಚರ್ಚೆ, ನಿಷ್ಕಾಪಟ್ಯ ಮತ್ತು ತಾಯೊಂದಿಗೆ ಇನಿವಾತು. ಇವುಗಳಲ್ಲಿ ನನ್ನ ಜೀವನ ರಹಸ್ಯವಿತ್ತು. ಕೊಂಚ ಹಿಂದೆ ಆ ಕನಸುಗಳನ್ನು ಕೂಡ ಕನವರಿಸಿಕೊಳ್ಳಲಾರದಾಗಿದ್ದೆ. ಪುನಃ ನನ್ನ ನೇರವಾದ ಗುರಿ ಕಾಣುತ್ತಿರುವುದು."

"ಈ ಹಣವನ್ನು ನಿನ್ನ ಘನ ವ್ಯಾಪಾರಕ್ಕೆ ಉಪಯೋಗಿಸುವೆಯಾ? ಈಗಾಗಲೇ ನೀನು ನಷ್ಟಪಟ್ಟಿರುವೆಯಲ್ಲವೆ?"

"ಈ ಸಲ ಲಾಭ ಹೊಂದುವೆನೆಂಬ ಭರವಸೆ ಇದೆ."

"ಈಸಲವೂ ನಷ್ಟವಾಗುವುದು."

ಹರೀಂದ್ರನ ಹುಬ್ಬಿನ ಬಳಿ ಸ್ವೇದ ಬಿಂದುಗಳು ನೆರೆದುವು: "ಆದರೇನಂತೆ? ಇನ್ನೊಮ್ಮೆ ದಾರಿದ್ರ್ಯದಲ್ಲಿ ಮುಳುಗಬೇಕಾಗುವುದು. ನನ್ನಲ್ಲಿನ ದೌರ್ಜನ್ಯವು ಸೌಜನ್ಯವನ್ನು ಕೊನೆಯವರೆಗೂ ಮೆಟ್ಟಿ ಮೆರೆಯುವುದೆ? ಅವೆರಡೂ ನನ್ನಲ್ಲಿ ತೀಕ್ಷ್ಣವಾಗಿ ಬಡಿದಾಡುತ್ತ ನನ್ನ ಅರಿಕೆಯಲ್ಲಿ ನನ್ನನ್ನು ದಿಗ್ಭ್ರಮಿಸುತ್ತಿವೆ. ಒಂದನ್ನು

ಮಾತ್ರ ನಾನು ಪ್ರೀತಿಸುತ್ತೇನೆಂದಲ್ಲ. ಎಲ್ಲವೂ ನನ್ನ ಪ್ರೀತಿಪಾತ್ರಗಳೆ. ಉದಾತ್ತ ಭಾವನೆಗಳನ್ನೂ ತ್ಯಾಗ ಬಲಿದಾನಗಳನ್ನೂ ಊಹಿಸಬಲ್ಲೆ. ಪಾಪಕಾರ್ಯದಿಂದ ನಾನೀ ತಳಕ್ಕೆ ಬಿದ್ದಿದ್ದರೂ ಕರುಣೆಯೆಂಬುದು ನನ್ನ ಆಲೋಚನೆಗಳಿಗೆ ಹೊರಗಲ್ಲ. ಬಡವರಿಗೆ ಕಣ್ಣೀರಿಡು ವೆನು. ಅವರು ಪಡುವ ಪಾಡು ನನಗಲ್ಲವೆ ಇತರರಿಗೆ ತಿಳಿಯದು. ಅವರಿಗೆ ನೆರವಾಗುವೆನು. ಪ್ರೇಮಾದರ್ಶ ವನ್ನು ಮೆಚ್ಚುವೆನು. ನ್ಯಾಯವಾದ ಮಂದಸ್ಮಿತವನ್ನೂ ಮೆಚ್ಚುವೆನು. ನನ್ನ ಎದೆಯು ಇಂಬೀಯದ ಒಳ್ಳಿತೇ ಇಹವಲ್ಲಿಲ್ಲ. ಪ್ರೇಯಸ್ಸು ಮಾತ್ರ ನನ್ನ ಸಾರಥಿಯಾಗಿ ಕೊನೆಯವರೆಗೆ ನಡೆಸಿ ನನ್ನಲ್ಲಿ ಸುಪ್ತವಾಗಿರುವ ಸೌಜ ನ್ಯವು ವಿಫಲವಾಗಬೇಕೆ? ಇಲ್ಲ ಶ್ರೇಯಸ್ಸೂ ಒಮ್ಮೆ ಹೊರಹೊಮ್ಮುತ್ತದೆ.''

ಆಗಂತುಕನು ಬೆರಳೆತ್ತಿದನು. "ಅದೃಷ್ಟ ಸಂತೋಷ ಗಳ ಪರಿವರ್ತನಗಳ ಮಧ್ಯೆ ಇದುವರೆಗಿನ ನಿನ್ನ ಕ್ರಮ ಕ್ರಮವಾದ ಪತನವನ್ನು ಅವಲೋಕಿಸುತ್ತಿದ್ದೆ. ಹದಿ ನೈದು ವರ್ಷಗಳ ಹಿಂದೆ ಅಸ್ತೇಯವೆಂದರೆ ಬೆಚ್ಚುತ್ತಿದ್ದೆ. ನೂರು ವರ್ಷಗಳ ಹಿಂದೆ ಕೊಲೆಯೆಂದರೆ ವಿಷಣ್ಣನಾಗಿ ಕಣ್ಣನ್ನೇ ಮುಚ್ಚಿಕೊಂಡುಬಿಡುತ್ತಿದ್ದೆ. ಈಗಲೋ ನೀನು ಎಸಗದೆ ಹಿಮ್ಮೆಟ್ಟುವ ಪಾಪಕಾರ್ಯವಾದರೂ ಉಂಟೆ? ಎಲ್ಲಿಗೆ ಬೇಕಾದರೂ ಬೀಳುವವನಾದೆ. ಯಾವ ಎತ್ತರ ದಿಂದ ಯಾವ ಕಮರಿಗೆ ಈ ಬೀಳು. ಇನ್ನೆರಡು ವರ್ಷ ಗಳ ಮೇಲೆ ಪರೀಕ್ಷಿಸುವೆನು. ನಿನ್ನ ಬಾಳು ಇಳಿಯುತ್ತ ಹೋಗುವುದೇ ಹೊರತು ಮೇಲಾಗದು. ಮರಣ ಮಾತ್ರ

ಈ ಇಳಿಜಾರನ್ನು ತಪ್ಪಿಸೀತು."

"ನಿಜ," ಎಂದು ಹರೀಂದ್ರನು ನೀರಸವಾಗಿ ನುಡಿಯುತ್ತ, "ಪಾಪದೊಂದಿಗೆ ನನ್ನ ವ್ಯವಹಾರ ನಡೆಸಿದೆ. ಎಲ್ಲರಿಗೂ ಅದು ಸಹಜವ್ಯಾಪಾರವಲ್ಲವೆ? ಋಷಿಗಳೂ ಒಮ್ಮೊಮ್ಮೆ ಸುತ್ತಿನ ಪರಿಸ್ಥಿತಿಗೆ ಒಗ್ಗಿಕೊಳ್ಳುವುದಿಲ್ಲವೆ?" ಎಂದನು.

"ಇನ್ನೊಂದು ಸುಲಭ ಪ್ರಶ್ನೆ. ನೀನು ಉತ್ತರ ಕೊಟ್ಟ ಮೇಲೆ ನಿನ್ನ ನೈತಿಕ ಜಾತಕವನ್ನು ತಿಳಿಸುವೆನು. ನಿನ್ನ ಬಾಳಿಗೊಂಡು ಶಿಸ್ತು ಬರಲಿಲ್ಲ. ನಿನ್ನ ಒಳ್ಳೆಯತನಕ್ಕೇ ಅದು ಹಾಗಾಗಿರಬಹುದು. ಬಹು ಜನರದೂ ಹಾಗೆಯೇ ಇರುವುದು. ಎಂದಾದರೂ ಇನ್ನು ಜೀವನದ ಯಾವ ಘಟ್ಟವನ್ನಾದರೂ ಸಂಯಮದಿಂದ ಮುಟ್ಟುವೆಯಾ?"

"ಇಲ್ಲ, ಆಗುವುದಿಲ್ಲ. ಎಲ್ಲ ತೆರನಲ್ಲೂ ಹಳ್ಳಕ್ಕೆ ಬಿದ್ದಿರುವೆನು," ಎಂದು ನಿರಾಶನಾಗಿ ಹರೀಂದ್ರನು ನುಡಿದನು.

"ಹಾಗಾದರೆ ಇನ್ನು ನೀನು ತಿದ್ದಿಕೊಳ್ಳಲಾರೆ. ಜೀವನ ರಂಗದಲ್ಲಿ ನಿನ್ನ ಪಾತ್ರದ ಮಾತುಗಳು ನೇರ್ಪಡಿಸಲಾರದಷ್ಟು ಹೊಲೆಯಾಗಿವೆ."

ಸ್ವಲ್ಪ ಹೊತ್ತು ಮೌನವಾಗಿದ್ದರು.

ಆಗಂತುಕನೇ ಮೌನವನ್ನು ಕಡಿದನು: "ಹಣವನ್ನು ತೋರಿಸಲೆ?"

"ನೀತಿ?"

"ಹಿಂದೊಮ್ಮೆ ನೀನದನ್ನು ನಡೆಯಲೆತ್ನಿಸಲಿಲ್ಲವೆ? ಅಲ್ಲಿ, ಅಂದು ವೇದಿಕೆಯ ಮೇಲೆ..........."

"ಹೌದು. ಈಗ ನನ್ನ ದಾರಿ ಸ್ಪಷ್ಟವಾಗಿದೆ. ನನ್ನ ಆತ್ಮಶೋಧನೆ ಮಾಡಿಸುದಕ್ಕೆ ನಿನಗೆ ನಾನು ಋಣಿ. ನನ್ನ ನಿಸರ್ಗಪ್ರವೃತ್ತಿಯು ಅರ್ಥವಾಗುತ್ತಿದೆ."

ಆ ಹೊತ್ತಿಗೆ ಹೊರಗೆ ಶಬ್ದವಾಯಿತು. ಆಗಂತುಕನು ಅದಕ್ಕೇ ಕಾಯುತ್ತಿದ್ದವನಂತೆ ಭಂಗಿಯನ್ನು ಬದಲಾಯಿಸಿದನು.

"ಸೇವಕನು ಬಂದ. ಮೊದಲೇ ಎಚ್ಚರಿಕೆ ಕೊಟ್ಟಂತೆ ಇನ್ನೊಂದು ದೊಡ್ಡ ತಡೆ. ಒಳಗವನನ್ನು ಪ್ರವೇಶಗೊಳಿಸಿ, ನಿನ್ನ ಸ್ವಾಮಿಗೆ ಮೈಯಲ್ಲಿ ಆರೋಗ್ಯ ಕೆಟ್ಟಿದೆಯೆಂದು ಹೇಳಿ ಗಂಭೀರ ಮುಖಮುದ್ರೆಯಿಂದಿರು. ನಗೆ ಬೇಡ. ಅತಿ ಅಭಿನಯವೂ ಬೇಡ. ವ್ಯಾಪಾರಿಯನ್ನು ಕೊಂದ ಚಳಕದಿಂದಲೇ ಸೇವಕನನ್ನೂ ತೀರಿಸಿಬಿಡು. ಪ್ರಗತಿ ನೇರವಾಗುವುದು. ಇನ್ನು ರಾತ್ರಿಯೆಲ್ಲ ಸೂರೆ ಮಾಡಬಹುದು. ಏಳು, ಏಳು, ನಿನ್ನ ಬಾಳು ಈಗ ತಕ್ಕಡಿಯಲ್ಲಿ ತೂಗುತ್ತ ಪದರುತ್ತಿದೆ. ಏಳು, ಬೇಗ ಕಾರ್ಯೋದ್ಯುಕ್ತನಾಗು."

ಹರೀಂದ್ರನು ಹಿತಚಿಂತಕನನ್ನು ದಿಟ್ಟಿಸಿದನು. "ಇನ್ನು ನಾನು ಪಾಪಕ್ಕೆ ಮನಸೋತರೆ ಪಾರಾಗಲು ಬಿಡುಗಡೆಗೆ ಬಾಗಿಲುಂಟು. ಕಾರ್ಯವಿಮುಖನಾದರೂ ಆಗಬಹುದು. ಬಾಳೇ ಹೊಲಸಾದರೆ ಅದನ್ನು ಮುಗಿಸಲೂಬಹುದು. ನೀನು ಹೇಳುವ ಸಣ್ಣ ಚಾಪಲ್ಯಗಳಿಗೆ ದಾಸನಾದರೆ ಚಿತ್ತಕ್ಷೋಭೆಯನ್ನು ಗೆದ್ದಿರಬಲ್ಲೆ. ನನ್ನಲ್ಲೇ ಪ್ರಕಾಶಕ್ಕೆಂದು ಮನೆಮಾಡಿಕೊಂಡು ಸುಪ್ತವಾಗಿರುವ ಸೌಜನ್ಯವು ನಿಷ್ಫಲವಾಯಿತು. ಆಗಲಿ! ಆದರೆ ಈಗಲೂ ದೌರ್ಜನ್ಯವನ್ನು

ಹೇಸುವೆನು. ಅದರಿಂದ ನಾನು ಈಗ ಹೇಗೆ ಧೃತಿವಂತ ನಾಗುವೆನೆಂದು ನೋಡಿ ನೀನು ಆಶಾಭಂಜಿತನಾಗು," ಎಂದು ನುಡಿದನು.

ಆಗಂತುಕನ ರೂಪು ರೇಖೆಗಳು ರಮ್ಯವಾಗಿ, ವಿಚಿತ್ರ ವಾಗಿ ವ್ಯತ್ಯಾಸವಾಗುತ್ತ ಬಂದುವು. ಒಂದು ಬಗೆಯ ಮಧುರ ಜಯೋನ್ಮತ್ತತೆಯಿಂದ ಹೊಳೆದು ಅಳಿದು ಹೋದುವು. ಹರೀಂದ್ರನು ಯೋಚಿಸಲು ನಿಲ್ಲಲಿಲ್ಲ. ವ್ಯಕ್ತಿಯಲ್ಲಾದ ಬದಲಾವಣೆಯನ್ನು ಗಮನಿಸಲಿಲ್ಲ. ಅಂತರ್ಮುಖಿಯಾಗಿ ಚಿಂತಿಸುತ್ತ ಮಹಡಿಯಿಳಿದನು. ತನ್ನ ಹಿಂದಿನ ಬಾಳು ಕಣ್ಮುಂದೆ ಜಾರಿತು ; ವಿಕಾರವಾದ ಘೋರ ಸ್ವಪ್ನದಂತೆಯೂ, ಅದೃಷ್ಟವು ನೆಯ್ದ ಜೀವಜಾಲ ದಂತೆಯೂ ಕಂಡಿತು. ಪರಾಭವದ ಭಯಾನಕ ದೃಶ್ಯ. ಅದನ್ನೀರೀತಿ ಕಂಡುದರಿಂದ ಈಗಿನ ಬಾಳನ್ನು ಮುಂದರಿ ಸಲು ರುಚಿಸಲಿಲ್ಲ. ಕೊನೆಗೆ ತನ್ನ ನೊಂದ ಜೀವನೌಕೆಗೆ ಶಾಂತಿಯ ತೀರವು ದೂರದಲ್ಲಿ ಕಂಡಿತು. ಮೆಟ್ಟಿಲನ್ನು ಇಳಿಯುತ್ತ ಚಿಂತಿಸಿದನು. ಅಂಗಡಿಯನ್ನು ನೋಡಿದನು. ಮೃತನ ಪಕ್ಕದಲ್ಲಿ ಮೇಣದ ಬತ್ತಿ ಇನ್ನೂ ಉರಿಯುತ್ತಿತ್ತು. ಅಲೌಕಿಕ ಶಾಂತಿ ಆವರಿಸಿತ್ತು. ಹಾಗೆಯೇ ನಟ್ಟನೋಟ ದಿಂದ ನಿಂತಿರುವಲ್ಲಿ, ಮೃತನ ಯೋಚನೆ ತಾನೇತಾನಾ ಯಿತು. ಪುನಃ ತಾಳ್ಮೆಯಿಲ್ಲದೆ ಬಾಗಿಲು ತಟ್ಟುವುದು ಕೇಳಿಸಿತು.

ಹೊಸ್ತಿಲಮೇಲೆ ನಿಂತು, ಹುಸಿ ನಗುತ್ತ ಸೇವಕನನ್ನು ದಿಗ್ಭ್ರಾಂತನನ್ನಾಗಿ ಮಾಡಿದನು : "ಪೋಲೀಸು ಠಾಣೆಗೆ ಹೋಗು. ನಿನ್ನ ಸ್ವಾಮಿಯನ್ನು ಕೊಲೆ ಮಾಡಿರುವೆನು."

# ಹೂಳಿಟ್ಟ ನೆನಹು



You shall sit sometimes, when the leaves are falling,
Alone in your heart, as I sit today,
And hear that voice from your dead past calling,
Out of the graves that you hid away.

—E. W. W.

“ಬೆಳಗಿನಿಂದ ಎಲ್ಹೋಗಿದ್ದೆ....ಯಾಕೆ ಮೈಯ್ಯಲ್ಲೀ ನಾಗಿದೆ....ಮೈ ಕೈ ಹೊಟ್ಟೆಶೂಲೇನೆ....ಹೆಚ್ಚಿಲ್ವಲ್ಲ?.... ಎಲ್ಲಿ ಕೊಂಚ ಹಾಗೆ ಮಲಕ್ಕೊ....ಯಾಕೆ ಸುಮ್ನೆ ನಿಂತಿದ್ದೀಯ....ಎಂದೂ ಕಾಣ್ಯ....ಹಾಗೆ....ಎಲ್ಲಿ....ಕೈಯ್ಯಾಕೆ ಹಿಡಕೋತೀಯಾ!....ಎಲ್ಲಿ...ಇಲ್ಲೀ ನೋಯತ್ತೇ....ಏನು ಬಂತು ನಿನಗೆ....ಕೊಂಚ ನೋಡೋಮ್ರೊಳಗೆ....ಎಂದೂ ಇಲ್ಲದ ನಾಚಿಕೆ....ಹಾಗೆ....ಧೈರ್ಯವಾಗಿರು....ಇಲ್ಲಿ....

ಏಳಬೇಡ. ಏನವಸರ....ಕೊಂಚ ಪ್ಲಾಸ್ಟರ್ ಹಾಕತೀನಿ ತಾಳು....ನೋಡು! ಈಗ ‘ಹಾ’ ಅನ್ನಸತ್ತೇನೋ.... ತಾಳು....ಒಂದು ಡೋಸು ಔಷ್ತಿನೂ ಹಾಗೆ ಕುಡಿದುಬಿಡು.....ಒಂದೇ ಡೋಸು....ಔಷ್ತಿ....ಎಲ್ಲಿ.....ಕೊಂಚ ಖೈಯ್ಯಾಗಿದೆ ಅಷ್ಟೆ....ಆಮೇಲೆ....ಎಲ್ಲಿ....ಇದನ್ನ ಕುಡದ್ಬಿಟ್ಟು ಆಮೇಲೆ....ಎಲ್ಲಾದ್ರೂ ಹಾಳಾಗು....ಅಯ್ಯೋರಾಮ! ಇಲ್ಲಿಂದ ಲೋಕಕ್ಕೆಲ್ಲಾ ಔಷ್ತಿಗಳ್ಹೋಗತ್ವೆ.... ನಿನಿಗೇನೋ ಬಂದ್ಬಿಟ್ಟಿದೆಯಲ್ಲಾ ಭಯ....ಹಾಗೆ....ಉಗಳ್ತೀಯ....ಸಧ್ಯ! ನನ್ತಲೆಗೆ ಕಟ್ಟಿಸ್ಲಲ್ಲಪ್ಪಾ....ಶನೀನಾ! ....ಆ!....”

* * * *

* * * *

“....ಈರಾ!”

“ ಬುದ್ದಿ....”

“....ಹೋಗೋಣ ಬರ್ತಿಯೇನೊ....”

" ಎಲ್ಗೆ ಬುದ್ಧಿ...."

" ಶ್ಮಶಾನಕ್ಕೆ...."

"....ಆಂ....ಮೊನ್ನೆ...."

" ಇವೊತ್ತು ಕೆಲ್ಸಯಿದೆ! "

"..............."

"....ಸ್ಕೆಲಿಟನ್ ಬೇಕಲ್ಲೊ...."

" ಅದೆ....ಮೊನ್ನೆ ತಂದ್ವಲ್ಲಾ ಬುದ್ಧಿ...."

"....ಆದಲ್ವೊ....ಆಂ....ಬಸರೀಯರ...."

"..............."

" ಯಾಕೊ....ಸುಮ್ನಿದ್ದೀಯಾ...."

" ಬಲ್‌ಕಷ್ಟ ಬುದ್ಧಿ....ಎಲ್ಲಿ ಸಿಕ್ತಾದೆ...."

"....ಅದೇನೋ ಹಾಗಂತೀಯಾ....ನಿಮ್ಜನದ ಶ್ಮಶಾನದಲ್ಲಿ...."

"....ಗೆಪ್ತಿಯಿಲ್ಲಾ....ನೋಡ್ಬೇಕು ಬುದ್ಧಿ."

" ಸರಿ. ಹೊರಡೋಣ ನಡಿ...."

"..............."

" ಬಾರೋ....ಹೊತ್ತಾಯ್ತು...."

" ಬಂದೆ ಬುದ್ಧಿ....ಹಾಳು ಪಿಕಾಶಿ ಎಲ್ಲೋ....ಮಾಯವಾಗೈತೆ...."

"...ಹೂ...ತೊಗೊಂಡ್ಬಾ..ಹನ್ನೊಂದುವರೆ ಆಯ್ತು."

"..............."

"....ತಂದೇನೊ...."

" ತತ್ತಾಯಿದ್ದೀನಿ ಬುದ್ಧಿ."

" ಆ ಬಾಗಲಿಗೆ ಒಳಗಡೆಯಿಂದ್ಲೆ ಬೋಲ್ಟ್ ಹಾಕು....

ಈಕಡೆಯಿಂದ್ಲೆ ಬೇಗ ಹಾಕ್ಕೊಂಡು ಹೋಗೋಣ....”

“...............”

“....ಲಾಟೀನು ಇಲ್ಲೇ ಹಚ್ಕೊಂಡ್ಬಿಟ್ಟೇಯಾ!.... ಕವರ್ ಮರತಬಿಟ್ಟೇಯ....”

“...............”

“....ಆಯ್ತೇನೋ....”

“ ನಡೀರೀ ಬುದ್ದಿ....”

* * * *

“ ಈರಾ....”

“....ಬುದ್ದಿ....ಮೋಟಾರ್ ದೀಪ ಆರಿಸ್ನಿಲ್ಲ....”

“ ಹು !......ಬಸರೀರ......ಹೆಣ ಸಿಗೋದು ಕಷ್ಟಾಂತೀಯ....”

“....ಔದು ಬುದ್ದಿ....”

“ ಮತ್ತೆ....”

“....ಅವನ ಮುಗ್ಳು....ಚುಂಚ ಅಲ್ಲೇ ತೋಟದಾಗೇ ಮಣ್ಮಾಡಸ್ದ....ಇನ್ನ್ಯಾವ್ದು....ನಂಗೆ ಮೊದ್ಲೆ ತಿಳಿದಿದ್ರೆ....”

“....ಈಗೇನ್ಮಾಡೋದೋಂದ್ರೆ....”

“...............”

“ ಈರಾ....”

“....ಬುದ್ದಿ.”

“....ಇವ್ಳು....ಇದ್ಲಲ್ಲಾ....ನಂಜಿ....”

“...............”

“ ನಂಜಿ....ಇದ್ಲಲ್ಲೋ....”

“....ಹೂ ಬುದ್ದಿ....ಅವ್ಳು....ಊ....ಔದು ಬುದ್ದಿ....”

"....ಅವಳ್ನ....ನಿಂಗೆ ತಿಳೀದೇನೋ...."

"ಔದು ಬುದ್ಧಿ....ನಾನೂ ಬಂದಿದ್ದೆ....ಅಪ್ಪಾರ ದಿನಾ ಆಯ್ತು...."

"....ಸರಿ, ಮತ್ತೆ. ಕವರ್ ಹಾಕಿದೀಯಾ....ಹಚ್ಚು ಲಾಟೀನ."

"..............."

"....ಯಾಕೊ ಕೈ ಅಷ್ಟು ನಡಗಸ್ತೀಯ....ನಡಿ...."

"....ಇಂಗ್ಬನ್ನೀ ಬುದ್ಧಿ."

* * * *

"ಒಂದೂವರೆ ಘಂಟೆ ಆಯ್ತಲ್ಲೋ...."

"ಇನ್ನೇನು....ಆಯ್ತು ಬುದ್ಧಿ.

"..............."

"....ಐಯ್ಯಬ್ಬ....ಅಶ್...."

"ಮೆಲ್ಗೇ....ಸಿಕ್ತೇನೊ...."

"....ಇನ್ನೇನು....ಆ !....ಅಬ್ಬಬ್ಬ !"

"....ಇನ್ನಾ ಅತ್ರ ಬನ್ನಿ ಬುದ್ಧಿ....ಆಕಡೆ...."

"....ತಲೆ....ಮೆತ್ಗೆ ಕತ್ಕೂರ್ದ್ದೀಯಾ...."

"....ಎಡಕಾಲ್ಬುದ್ದೀ....ಅಬ್ಬಬ್ಬ...."

"....ಹೂ....ಬಿಡು....ಸರಿ."

"..............."

"ಯಾಕೋ—ಕಣ್ಣು ಒರಸ್ಕೋತೀಯಾ...."

"ಯಾತ್ಕೂ ಇಲ್ರ ಬುದ್ಧಿ."

"ಮಣ್ಬತ್ತೇನೋ...."

"ಇಲ್ರ ಬುದ್ಧಿ...."

"ಮತ್ತೆ...."

"ಎಲ್ಲೋ....ಕೊಂಚ ಬಿತ್ತು...."

"....ಮಣ್ಣು ಭರ್ತಿ ಹಾಕ್ಬಿಡು. ಅಲ್ಲಿ ಕಲ್ತಂದಾ ಕಿದೀನಿ....ಬುಡಕ್ಕೆ ಸುರದುಬಿಡೋಣ..."

* * * *

"...ಬೇಕಾದ್ರೆ..ಯಾಕೋ...ಹಾಗೆ ನೋಡ್ತೀಯಾ..."

"ಅವಳ್ತಾನೆ ಬುದ್ದಿ....ಈ ಮೂಳೀ...."

"....ಹೌದೋ...."

"....ಕೆಂಪಾನೆ ಉಡಗಿ—ಉ!"

"ಏನೋ...."

"ನಡೀರಿ ಬುದ್ದಿ....ಆಗ್ಲೇ ಬೆಳಕ್ಬರೋ ಅಂಗೈತೆ.... ಲಾಟೀನು ಆರ್ಸಿಬುಡಿ ಬುದ್ದಿ."

* * * *

"ಯಾಕೆ....ಇಷ್ಟು ಹೆದರ್ತಿ."

"....ಬುಡಿ ಬುದ್ದಿ."

"....ಅಯ್ಯಯ್ಯೊ....ಯಾಕೇ."

"....ಯಾರಾದ್ರೂ ನೋಡಾರು."

"....ಇಲ್ಲ್ಯಾರು ನೋಡ್ತಾರೇ."

"....ಕೆಲ್ಸ ಐತೆ....ಬುಡೀಂದ್ರೆ."

"....ಆಂ!....ಏನೇ ಕೆಲ್ಸ...."

"....ಇನ್ನೂ ದೊಡ್ಡ ಲಾಬೋಟರಿ ಗುಡ್ಸಿಲ್ಲ...."

"....ಆಮೇಲೆ ಗುಡಿಸಿದ್ರಾಯ್ತು."

"....ಸೀರೆಯಲ್ಲಾ ದೂಳಾಗೈತೆ."

"....ಅದೇನ್ಮಾಡತ್ತೀ....ಆಂ!"

"....ಬುಡಿ....ಸಂಜೆಗೆ ನಾನೇ ಅಡ್ಗೆ ಮಾಡ್ಬೇಕು...."

"....ಒಹೋಹೊ....ಬಲೆಬಲೆ....ಆಂ!"

"....ಬಯ ಆಗ್ತಾದೆ....ಅಂದ್ರೆ."

"....ನಾಸಿರೋವಾಗ ನಿನ್ಗೇನೆ....ಭಯಮತ್ತೆ....ನಾನೇನು ಮನುಷ್ಯನಲ್ವೆ....ಆಂ!"

* * * *

"ನಂಜೀ....ನಿಂಗೆಷ್ಟು ಈಗ ವಯಸ್ಸು...."

"ಏಸೋ....ಬುಡಿ ಬುದ್ದಿ."

"....ಇರ್ಲಿ....ಹೇಳಿ...."

"....ಮೊನ್ನೇಕೇ ಅದ್ನಾರಾಯ್ತು....ಅಂತ."

"....ಆಂ!....ತಲೆ ಬಾಚ್ಕೊಂಡೆಷ್ಟುದಿನಾ ಆಯ್ತೊ...."

"..............."

"ಯಾಕೆ....ಕಣ್ಣಲ್ಲಿ....ನೀರು."

"....ಬಯ ಆಗ್ತಾದೆ ಬುದ್ಧಿ."

"ಅಯ್ಯಯ್ಯೊ! ಏನ್ಬಂತೆ....ಆಂ!"

"..............."

* * * *

"....ಈಗೆಲ್ಲಾ ಎಲ್ಹೋಯ್ತೋ...."

"....ಏನು?"

"....ಭಯ....ಅಳು...."

"....ಹ!...."

"....ಯಾಕೆ ಹಾಗೆ ನಗತೀಯಾ...."

"....ಹ! ಹ! ಹ! ಹ್ಹಾ...."

"ನೋಡ್ದ್ಯಾ ಅವಳ್ನ...."

"ಹ!....ಆಂ!"

"....ಎಲ ಗಂಡಬೀರಿ....ಆಂ!"

"....ಆಂ!"

* * * *

"ನಂಜೀ.....ಹಾ! ನೋಡ್ದ್ಯ.....ಹ್ಯಾಗೆ ಬದಕಸ್ಬಿಟ್ಟಿ......ಆ! ಮೆಲ್ಲಗೆ.....ಏಳು......ಯಾಕೇ ಹಾಗೆ ನೋಡ್ತಿಯಾ....ನಾನೇನ್ಮಾಡಿದ್ನೇ....ಆ! ನಾನೆ....ನಾನೆ ....ಇಲ್ಲ! ಇಲ್ಲ!.....ನಿನ್ನ.....ಇಲ್ಲ.....ನಂಜೀ.....ನಾನು ಕೊಲ್ಲಲಿಲ್ಲ.....ನನ್ಮಾನ.....ಇಲ್ಲ.....ನಿನ್ಮಾನಾನೂ ಉಳುಸೋಕೆ.....ಗರ್ಭ ಇಳಸೋಕೆ.....ಇಲ್ಲ.....ನಂಜಿ.....ಬರೀ ಔಷ್ತಿ....ಅಯ್ಯೋ!—ಕತ್ತು....ಬಿಡು.....ಹೌದು....ನಿಜ ....ವಿಷ....ಕತ್ತು! ಅಯ್ಯೊ! ಉಸರು....ಹಿಸಕಬೇಡ್ವೇ ....ನಂಜಿ! ಅಯ್ಯೋ!....ಈ....ರಾ...."

* * * *

ವಿಶಾಲವಾದ ಪ್ರಯೋಗ ಶಾಲೆಯಲ್ಲಿ, ಬಿದ್ದ ಶಬ್ದವು ಖಣಖಣಿಲೆಂದು ಎಲ್ಲೆಲ್ಲಿಯೂ ಪ್ರತಿಧ್ವನಿಗೊಂಡಿತು. ಭೂಕಂಪವಾದಂತಾಗಿ ಅಲ್ಲಿನ ಪ್ರಸಾಧನಗಳೆಲ್ಲ ಒಂದರ ಮೇಲೊಂದುರುಳಿ, ಅಲ್ಲೋಲಕಲ್ಲೋಲವಾಗಿಹೋಯಿತು.

ಈರನು ಬಂದು ನೋಡಿದಾಗ ತನ್ನ ಯಜಮಾನನಿಗೂ, ನಂಜಿಯ ಮೂಳೆಗಳಿಗೂ ಒಟ್ಟಿಗೆ ಗೋರಿಯಾಗಿದ್ದಿತು.



# ೧

ಕ್ರಿಸ್ತಪೂರ್ವ ಮೂರನೆಯ ಶತಮಾನದ ನೀಲಗಗನವು ಶುಭ್ರವಾದ ಮಂದಹಾಸದಿಂದ ವಿಶ್ವವನ್ನಪ್ಪಿ ಕೊಂಡಿದ್ದಿತು.

ಕೆಳಗೆ, ಅತ್ಯಂತ ವಿಸ್ತಾರವಾದ ಮೈದಾನ.

ಅದರ ಮಧ್ಯದಲ್ಲಿ ಸಾಂಚಿಸ್ತೂಪ.—

ಬೋರಲಾಗಿರುವ ಬಾನಬಟ್ಟಲಿನಲ್ಲಿ, ಬೋರಲಾಗಿ ರುವ ಕಲ್ಲುಬಟ್ಟಲು. ಆ ಹೊಸದಾದ ಎಳೆಯ ಬೆಳಕಿ ನಲ್ಲಿ, ಅವೆರಡನ್ನೂ ನೋಡುತ್ತಿದ್ದರೆ,

“ ಬಯಲು ಆಲಯದೊಳಗೋ,

ಆಲಯವು ಬಯಲೊಳಗೊ....” ಎಂದೆನ್ನಿಸುವುದು.

ಸ್ತೂಪದ ಪೂರ್ವಭಾಗದಲ್ಲಿ ಒಂದು ವಿಹಾರ. ಅದರ ಮುಂದೊಂದು ಹೂದೋಟ. ಅಲ್ಲಿ ಭಿಕ್ಷುಗಳ ಸಣ್ಣ ದೊಂದು ಗುಂಪು ಸೇರಿದೆ. ಎಲ್ಲರ ಮುಖಗಳಲ್ಲಿ ಮನಸ್ಸಿನ ಗಾಬರಿಯು ಕಾಣಿಸುತ್ತಿದೆ. ಆದರೆ ಗಲಾಟೆಯಿಲ್ಲ....

ಗುಂಪಿನ ಮಧ್ಯವಲ್ಲಿ ಭಿಕ್ಷುವೊಬ್ಬನು ನೆಲದ ಮೇಲೆ ಬಿದ್ದಿದ್ದಾನೆ. ಅವನ ತಲೆಯನ್ನು ಭಿಕ್ಷುಣಿಯೊಬ್ಬಳು ತನ್ನ ತೊಡೆಯ ಮೇಲಿಟ್ಟುಕೊಂಡು, ವಿಶಾಲವಾದ ಹಣೆಯನ್ನು ನೀರಿನಿಂದ ತೊಳೆಯುತ್ತಿದ್ದಾಳೆ. ಅವಳು ಮಧ್ಯೆ ಮಧ್ಯೆ ಕೈಯನ್ನು ಮೇಲೆತ್ತಿದ್ದಾಗ, ಭಿಕ್ಷುವಿನ ಹಣೆಯ ಮೇಲಿರುವ ಬಲವಾದ ಪೆಟ್ಟಿನ ಗುರುತು ಕಾಣಿಸುತ್ತಿದೆ....

ಅಷ್ಟು ಹೊತ್ತಿಗೆ, ಇನ್ನೊರ್ವ ಭಿಕ್ಷುಣಿಯು ಬಂದು, ಚೀಲವೊಂದನ್ನು ಬಾಯಿಬಿಚ್ಚಿ ಹಿಡಿದು, ನೀಡುತ್ತಾಳೆ. ಉಪಚರಿಸುತ್ತಿರುವ ಭಿಕ್ಷುಣಿಯು ಅದರಿಂದ ಯಾವುದೋ ಒಂದು ಹಸುರು ಪುಡಿಯನ್ನು ತೆಗೆದು ಪೆಟ್ಟಿನ ಮೇಲೆ ನಿದಾನವಾಗಿ ಉದುರಿಸಿ, ಅದರ ಮೇಲೆ ತನ್ನ ಅಂಗೈಯನ್ನು ಇಡುತ್ತಾಳೆ.—

ಭಿಕ್ಷುವು ಕಣ್ಣುಗಳನ್ನು ತೆರೆದನು.

ಆ ಕಣ್ಣುಗಳಲ್ಲಿ ಅಪೂರ್ವವಾದ ಬೆಳಕೂ ಚಾಂಚಲ್ಯವೂ ಇದ್ದವು. ಒಮ್ಮೆ ಸುತ್ತಲೂ ನೋಡಿದನು. ಒಬ್ಬ ಭಿಕ್ಷುವಿನ ಮೇಲೆ ಅವನ ಕಣ್ಣುಗಳು ನೆಟ್ಟವು.—

"ನನ್ನನ್ನಿಲ್ಲಿಗೆ ತಂದವನು ನೀನೆ....?" ಎಂದನು. ಧ್ವನಿಯು ಕ್ಷೀಣವಾಗಿದ್ದರೂ ಗಂಭೀರವಾಗಿದ್ದಿತು.

ಪ್ರಶ್ನಿತ ಭಿಕ್ಷುವು ತಲೆವಾಗಿದನು.

"ಎಷ್ಟು ಹೊತ್ತಾಯಿತು ?"

"ಅರ್ಧ ಘಳಿಗೆಯಾಗಿರಬಹುದು."

ಭಿಕ್ಷುವು ಕ್ಷಣ ಸುಮ್ಮನಿದ್ದು, ಏಳಲುಜ್ಜುಗಿಸಿದನು. ಕೂಡಲೆ ಇಬ್ಬರು ಭಿಕ್ಷುಗಳು ಮುಂದೆ ಬಂದು ಅವನ ಕಂಕುಳುಗಳಿಗೆ ಕೈಗಳನ್ನು ಕೊಟ್ಟು ಮೆಲ್ಲನೆ ನಿಲ್ಲಿಸಿದರು. ಉಪಚರಿಸುತ್ತಿದ್ದ ಭಿಕ್ಷುಣಿಯು ಸರಿದು ನಿಂತಳು. ಆಗ ಅವಳನ್ನು ನೋಡಿದನು.

"ತಂಗಿ, ನೀನು ಹೊಸಬಳಂತೆ ಕಾಣುತ್ತೀಯೆ...."

"ಹೌದು, ನಿನ್ನೆ ಬಂದೆ—ಉಜ್ಜಯಿನಿಯಿಂದ...."

"ಗುರುಗಳು ಸೌಖ್ಯವೆ...."

"ಸೌಖ್ಯ. ತಮ್ಮನ್ನು ವಿಚಾರಿಸಬೇಕಾಗಿ ಹೇಳಿ

ದರು...." ಎಂದು, ತಲೆವಾಗಿದಳು. ಭಿಕ್ಷುವು ಪುನಃ ಗುಂಪಿನ ಕಡೆಗೆ ತಿರುಗಿ, ತನ್ನನ್ನು ನಿಲ್ಲಿಸಿಕೊಂಡಿದ್ದ ಇಬ್ಬರು ಭಿಕ್ಷುಗಳ ಭುಜಗಳ ಮೇಲೆ ತನ್ನ ಕೈಗಳನ್ನಿಟ್ಟನು. ನಿದಾನವಾಗಿ—

"ಭಿಕ್ಷುಗಳೆ....ನಿಮ್ಮಗಳ ಗಾಬರಿಯೂ ಕುತೂಹಲವೂ ಇಷ್ಟು ಇದ್ದಿರಬೇಕಾಗಿರಲಿಲ್ಲ... ನಿನ್ನೆ ಸಾಯಂಕಾಲ....ಸೀತಾಪುರದ ರಸ್ತೆಯಲ್ಲಿ....ಹೊತ್ತು ಮೀರಿದ್ದಿತು. ಐದು–ಆರು ಜನ ಕಳ್ಳರು ಇಬ್ಬರು ಪ್ರಯಾಣೀಕರನ್ನು....ಸಾಮದಾನಗಳನ್ನು ಉಪಯೋಗಿಸಲೆ...."

ಗುಂಪಿನಲ್ಲೆಲ್ಲರ ಮುಖಗಳ ಮೇಲೆಯೂ ಕಿರುನಗೆಯು ಮೂಡಿತು. ಭಿಕ್ಷುವು ಮುಂದುವರಿದನು :

"....ಭೇದಕ್ಕೆ ಹೊತ್ತು ಸಾಲುವಂತೆ ತೋರಲಿಲ್ಲ.... ಮರದ ಕೊಂಬೆಯನ್ನು ಉಪಯೋಗಿಸಬೇಕಾಯಿತು. ಆ ಗಲಿಬಿಲಿಯಲ್ಲಿ ಪ್ರಯಾಣೀಕರು ತಮ್ಮ ದಾರಿಯನ್ನು ಹಿಡಿದರು....ಅವರು ತಪ್ಪಿಸಿಕೊಂಡರೋ ಇಲ್ಲವೋ ಎಂದು ನೋಡುವಾಗ ಕೊಂಚ ಅಜಾಗರೂಕನಾದೆ...."

ಭಿಕ್ಷುವನ್ನು ಮೆಲ್ಲನೆ ಒಳಕ್ಕೆ ಕರೆದುಕೊಂಡು ಹೋದರು.

## ೨

ರಾತ್ರಿ ಹತ್ತು ಘಂಟೆ ಇದ್ದಿರಬಹುದು.

ಆ ನೀರವತೆಯಲ್ಲಿ—

ಒಂದೇ ಕಲ್ಲಿನಲ್ಲಿ ಕೊರೆದ ಓವರಿ. ಅದಕ್ಕೆ ಉತ್ತರ ಮುಖವಾಗಿ ಒಂದೇ ಗವಾಕ್ಷ. ಅದನ್ನು ಹಳದಿಯ ಬಟ್ಟೆಯೊಂದು ಮುಚ್ಚಿದೆ. ಎಡಗಡೆ ಕೊರೆದ

ಗೂಡೊಂದು. ಅದರ ಹೊರಮೂಲೆಯಲ್ಲೊಂದು ಹಣತೆ. ಅದರ ಚಂಚಲಾಂಶುವು ಆ ಗೂಡಿನಲ್ಲಿರುವ ಬುದ್ಧನ ಚಿಕ್ಕ ಕಲ್ಲು ಪ್ರತಿಮೆಯನ್ನು ಚಂಚಲವಾಗಿ ಬೆಳಗುತ್ತಿದೆ.

ಆ ಗೂಡಿನ ಕೆಳಗಡೆ, ನೆಲದ ಮೇಲೆ ಭಿಕ್ಷುವು ಕುಳಿದ್ದಾನೆ....ಆ ಮೂರ್ತಿಯನ್ನೇ ನೋಡುತ್ತಿದ್ದಾನೆ....

ಅರೆ ನಿಮಿಷವಾಯಿತು.—

ತನ್ನ ತೊಡೆಯ ಮೇಲಿದ್ದ ತಾಳೆ ಗರಿಯ ಪುಸ್ತಕವನ್ನು ಓದಲಾರಂಭಿಸಿದನು. ಇದ್ದಕ್ಕಿದ್ದ ಹಾಗೆಯೇ—

"ಛಿ!"

ಎಂದು ಹಲ್ಲು ಕಡಿದು, ಆ ಕಲ್ಲುನೆಲವನ್ನು ಬಲಗೈಯಿಂದ ಬಡಿದನು....ಕೊಂಚಹೊತ್ತು ಸುಮ್ಮನಿದ್ದು—

"ಏನಿದು ಹೀಗಾಗುತ್ತಿದೆ! ಅವಳ ಮುಖವೇಕೆ ನನ್ನನ್ನು ಪೀಡಿಸಬೇಕು?........ಸುಂದರವಾದುದೇನೋ ಸರಿ....ಹು! ನಾನು–ಅಷ್ಟು ಶಕ್ತಿಹೀನನೆ....?" ಎಂದುಕೊಂಡನು.

ದೀಪವು ಕುಂದುತ್ತಾ ಬಂದಿದ್ದಿತು. ಪುಸ್ತಕವನ್ನು ಒತ್ತಟ್ಟಿಗಿಟ್ಟು, ಎದ್ದು ದೀಪವನ್ನು ದೊಡ್ಡದು ಮಾಡಿ ಕುಳಿತುಕೊಂಡನು.

ಆತ್ಮಶೋಧನೆಗೆ ಆರಂಭವಾಯಿತು.

"ನಾನು ಶಕ್ತಿಹೀನನೆ?....ನಲವತ್ತೈದು ವರುಷಗಳ ಬ್ರಹ್ಮಚರ್ಯ....ಆ ಸ್ನಾನಗಳು....ಆ ಉಪವಾಸಗಳು....ಆ ನಡಿಗೆ....ತೊನ್ನುರೋಗದವರು....ಸಿಡುಬಿನ ಹಾವಳಿಯಲ್ಲಿ....ಹೆಣಗಳೋ...ಮನುಷ್ಯರೋ...ಅದಲ್ಲ; ಅವಲ್ಲ. —ಅದು ಶಕ್ತಿಹೀನತೆಯಲ್ಲ. ಅದು ನನ್ನ ಅಶಾಂತಿಯ

ರೂಪು....ಆ ಅಶಾಂತಿಯು ಹೋಗುವುದೇ?...."

ಸ್ವಲ್ಪಹೊತ್ತು ಸುಮ್ಮನಿದ್ದನು. ಹಾಗೆಯೇ ಬಲಗಡೆಗೆ ತಿರುಗಿದನು. ಅಲ್ಲಿ, ಕೊರೆದ ಗೂಡುಗೂಡುಗಳಲ್ಲಿ ಸಾಲುಸಾಲಾಗಿ ಗ್ರಂಥಗಳು. ಅವುಗಳನ್ನೇ ನೋಡುತ್ತ-

"ನಾನು ಓದದಿರುವ ಗ್ರಂಥವಾವುದು?....ನನಗೆ ತಿಳಿಯದ ಮತವಾವುದು?....ನಾನು ಯವನರ ದೇಶದಲ್ಲಿ ಉಪನ್ಯಾಸಗಳನ್ನು ಕೊಟ್ಟಾಗ....ಹುಂ!—ಮತಗಳೆಲ್ಲ ಮನುಷ್ಯರಿಗೆ...."

ಸುಮ್ಮನೆ ಕುಳಿತುಕೊಂಡನು. ದೀಪವು ನಂದುತ್ತಾ ಬಂದಿತು. ಎದ್ದು ದೀಪವನ್ನು ಸರಿಮಾಡಿ ಪುನಃ ಕುಳಿತುಕೊಂಡನು.

"ಇವರೆಲ್ಲರಿಗೂ ಭಯ!....ಅದೇ. ಇಲ್ಲದಿದ್ದರೆ, ಮೊನ್ನೆ, ಭಾರತಿಯು ಐವತ್ತು ವರುಷಗಳ ಲೆಕ್ಕಾಚಾರಗಳನ್ನು ಮುಂದಿಟ್ಟು ಅದರ ಆಧಾರದ ಮೇಲೆ ಪೃಥ್ವಿಯನ್ನು ವಿಶ್ವಕ್ಕೆ ಹೋಲಿಸಿ, ಅದರ ಸಾಸಿವೆಯ ಕಾಳಿಗಿಂತ ಕೀಳಾದ ಬಾಳನ್ನು, ಪ್ರತಿಪಾದಿಸಿದಾಗ....ಎಲ್ಲರೂ ಅವನ ಮೇಲೆ ಬಿದ್ದರು....ಮನುಷ್ಯಜಾತಿಯೇ ಪ್ರಮುಖವಾದುದೆಂಬ ಅಟ್ಟಹಾಸವನ್ನೊಳಗೊಳ್ಳದ ಮತವೇ ಇಲ್ಲ... ದೇವ! ದೇವ!" ಎಂದು ಹಾಗೆಯೇ ಬುದ್ಧವಿಗ್ರಹವನ್ನು ನೋಡಲಾರಂಭಿಸಿದನು.

ದೀಪವು ಕುಂದುತ್ತಾ ಬಂದದ್ದಿತು. ಎದ್ದು ಸರಿಪಡಿಸಿ ಕುಳಿತುಕೊಂಡನು.—

"ದೇವ....ನಿನ್ನಲ್ಲೂ ಆ ಸೊಂಕು ಇದೆಯಲ್ಲ....ನಾನು ಅರಿಯದವನೋ....ಅರಿಯಲಾರದವನೋ....ಅರಿಯಲು

ಕಾತರಪಡುವವನು-ಅನುಗ್ರಹಿಸು...." ಎಂದು ಹಾಗೆಯೇ ಬುದ್ಧನನ್ನು ನೋಡಲಾರಂಭಿಸಿದನು. ಬುದ್ಧನ ಮುಖದ ಮೇಲೆ ಕಿರುನಗೆಯೊಂದು ಉತ್ಪನ್ನವಾಯಿತು.

"ಇಲ್ಲ, ಇಲ್ಲ. ಇಲ್ಲ! ನಾನು ಹಲುಬಿದರೇನು ಫಲ?" ಎಂದು ನಿಟ್ಟುಸಿರೊಂದನ್ನು ಬಿಟ್ಟು ತನ್ನ ಕೂಡಿಸಿದ ಮಂಡಿಗಳ ಮೇಲೆ ತಲೆಯನ್ನಿಟ್ಟುಕೊಂಡನು.

೩

ದೀಪವು ನಂದಿಹೋಗುವ ಸ್ಥಿತಿಯಲ್ಲಿದೆ....

ಭಿಕ್ಷುವು ಹಾಗೆಯೇ ಇದ್ದಾನೆ....

ಒಮ್ಮೆಯೇ ಮೇಲಕ್ಕೆದ್ದನು. ಏಳುವಾಗಲೇ—

"ಇದೆಲ್ಲ ನಿಷ್ಫಲ. ಇಷ್ಟು ಶತಮಾನಗಳ ಪ್ರಯತ್ನವೆಲ್ಲ ನಿಷ್ಫಲ....ಅಯ್ಯೋ!....ಗುರುದೇವಾ, ನೀನೇಕೆ ನನ್ನ ಕೈಯನ್ನು ಬಿಟ್ಟೆ!....ಅಲ್ಲ!....ಏಕೆ....ನನಗೇನು ಭಯ? ಇನ್ನೇನು ಭಯ?—ನಿನ್ನ ಕೈಯಲ್ಲೂ ಇಲ್ಲ, ಇಲ್ಲ!—ಇದು ದ್ರೋಹದ ಮಾತು—ಆದರೆ—ನಿಜ!"....ಕತ್ತಲೆಯಾದ ಹಾಗಾಯಿತು....ಆರಿಹೋಗುತ್ತಿದ್ದ ದೀಪವನ್ನು ಬೇಗನೆ ಸರಿಮಾಡಿದನು. ಹಾಗೆಯೇ ಬುದ್ಧನನ್ನು ನೋಡುತ್ತಾ—

"'ಆತ್ಮವಿದೆಯೆ?' ಎಂದರೆ ಉತ್ತರವಿಲ್ಲ; 'ಆತ್ಮವಿಲ್ಲವೆ?' ಎಂದರೂ ಉತ್ತರವಿಲ್ಲ.—ಏನೋ....

ಇದೆಲ್ಲ ಕನಸಾದರೂ ಸಹ್ಯ....ಆದರೆ....ಅಬ್ಬಾ! ಅದು ಅಲ್ಲ ಶೂನ್ಯವಾದರೆ....ಹಾ!"

ಭಿಕ್ಷುವು ರಪ್ಪನೆ ಕೆಳಗೆ ಬಿದ್ದನು.

೪

ಹಣತೆಯು ಸಣ್ಣಗಾಗಿ ಉರಿಯುತ್ತಿದೆ.

ಭಿಕ್ಷುವು ಗವಾಕ್ಷದಿಂದ ಹೊರಗೆ ನೋಡುತ್ತಿದ್ದಾನೆ.— ತೆಳ್ಳನೆಯ ಬೆಳ್ಳನೆಯ ಬೆಳದಿಂಗಳು ಸುತ್ತಲಿನ ಹೂಗಿಡಗಳನ್ನು ಬೆಳಗುತ್ತಿದೆ. ಆಕಾಶದಲ್ಲಿ ಮೋಡಗಳು ತೆಳ್ಳಗೆ ಬೆಳ್ಳಗೆ ಮೆಲ್ಲನೆ ತೇಲುತ್ತಿವೆ.—

....ಭಿಕ್ಷುವು ಮೆಲ್ಲನೆ ಮಾತನಾಡಿಕೊಳ್ಳುತ್ತಿದ್ದಾನೆ.—

"ಈ ಸೌಂದರ್ಯದಲ್ಲಿ ಶಾಂತಿಯಿದೆ. ಕ್ಷಣಿಕವಾಗಿರಬಹುದು....ಕಂಡವರಾರೋ? ಆದರೂ ಶಾಂತಿಯಿದೆ.... ಹು! ಆ ಅರಣ್ಯರೋದನ....ಅದರಿಂದೇನು ಪ್ರಯೋಜನ?—"

....ಕಿಟಕಿಯಿಂದ ಮೆಲ್ಲನೆ ಬುದ್ಧನ ಕಡೆ ತಿರುಗಿದನು. ಆ ಸೌಮ್ಯವಾದ ಬೆಳಕಿನಲ್ಲಿ ಬುದ್ಧನು ಸಂಪೂರ್ಣವಾದ ಸ್ಥಿರತೆಯಿಂದ ಕುಳಿತಿದ್ದನು....

....ಭಿಕ್ಷುವಿನ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರು ಬರಲಾರಂಭಿಸಿತು....

೫

ಭಿಕ್ಷುವು ಪುನಃ ಗವಾಕ್ಷದ ಕಡೆಗೆ ತಿರುಗಿದಾಗ, ಪೂರ್ವ ದಿಕ್ಕಿನಲ್ಲಿ ಮಸಕು ಮಸಕಾದ ಬೆಳಕು ಕೊಂಚ ಕೊಂಚವಾಗಿ ಪ್ರಸರಿಸುತಲಿದ್ದಿತು.

ಅವನ ಗವಾಕ್ಷದ ಮುಂದೆ ಒಂದು ಚಿಕ್ಕ ತೋಟ; ಅದರಾಚೆ ಇನ್ನೊಂದು ಓವರಿ. ಅದರಲ್ಲಿ ಯಾರೋ ದೀಪವನ್ನು ಹಚ್ಚಿದರು. ಗವಾಕ್ಷವು ಕೆಂಪು ಬಟ್ಟೆಯಿಂದ ಮುಚ್ಚಿದ್ದುದರಿಂದ ಯಾರೆಂದು ಹೇಳಲಾಗುವಂತಿರಲಿಲ್ಲ....

....ಸ್ವಲ್ಪ ಹೊತ್ತಾದ ಮೇಲೆ ಆ ವ್ಯಕ್ತಿಯು ತನ್ನ ಉಡುಪನ್ನು ತೆಗೆಯುತ್ತಿರುವಂತೆ ಭಾಸವಾಯಿತು. ಭಿಕ್ಷುವಿಗೇಕೋ ಎದೆಯ ಬಡಿತವು ಹೆಚ್ಚಿದಂತಾಯಿತು.—

ಅಷ್ಟು ಹೊತ್ತಿಗೆ ಸರಿಯಾಗಿ, ಬೆಳಗಿನ ಝಾವದ ಗಾಳಿಯು ಬೀಸಲಾರಂಭಿಸಿತು. ಬಟ್ಟೆಯು ಕೊಂಚ ಓರೆಯಾಯಿತು.—

ಭಿಕ್ಷುವಿಗೆ ವಿದ್ಯುತ್ಪ್ರಹಾರವಾದಂತಾಯಿತು. ಸರ್ರನೆ ಹಿಂದಕ್ಕೆ ಬಂದನು. ಮೈಯೆಲ್ಲ ನಡುಗಿಹೋಯಿತು. ಇದ್ದಕ್ಕಿದ್ದ ಹಾಗೆಯೆ—

"ಅಬ್ಬಾ! ಏನು ರೂಪರಾಶಿ....ಇವಳು ಇಲ್ಲಿ ಹೇಗೆ ಬಂದಳು?...." ಎಂದು, ಮೈಮರೆತವನಂತೆ ತಿರುಗಿ ಗವಾಕ್ಷದ ಬಳಿಗೆ ಹೊರಡಲುಜ್ಜುಗಿಸಿದನು. ಯಾವುದೊ ಪ್ರಬಲವಾದ ಶಕ್ತಿಯು ಅವನನ್ನು ಹಿಂದಕ್ಕೆ ಝಾಡಿಸಿ ತಳ್ಳಿತು. ಬಿಗಿಹಿಡಿದಿದ್ದ ತನ್ನ ಮುಷ್ಟಿಗಳನ್ನು ನೋಡುತ್ತ—

"ಛೆ!....ಛೆ! ನಲವತ್ತೈದು ವರುಷಗಳ ಚಿತ್ತಸಂಯಮನ....ಇಂದು ಒಬ್ಬ ಸ್ತ್ರೀಯಳ ನಗ್ನಾವಸ್ಥೆಯನ್ನು...." ಮೈಯೆಲ್ಲ ಬೆವರಿಹೋಯಿತು.

ಹಾಗೆಯೇ ಬುದ್ಧನ ಕಡೆಗೆ ನೋಡಿದನು.

ಅದೇ ಶಾಂತಿ........

ಹಾಗೆಯೇ ನೋಡಲಾರಂಭಿಸಿದನು....

ಎರಡು ಚಿಟ್ಟೆಗಳು ಮೆಲ್ಲನೆ ಹಾರಾಡುತ್ತ, ಹಣತೆಯ ಪ್ರದಕ್ಷಿಣೆಯನ್ನು ಮಾಡುತ್ತ, ಬುದ್ಧನ ಮೇಲೆ ಕುಳಿತವು....

ಭಿಕ್ಷುವಿನ ದೇಹಾದ್ಯಂತವೆಲ್ಲವೂ ನಡುಗಿತು. ಕಳ್ಳನಂತೆ ಹೆಜ್ಜೆಯಿಡುತ್ತ ಗವಾಕ್ಷದ ಬಳಿಗೆ ನಡೆದನು....

....ಕೆಂಪು ಬಟ್ಟೆಯನ್ನು ಗಾಳಿಯು ಸಂಪೂರ್ಣವಾಗಿ ತೆರೆಯಿತು....ಭಿಕ್ಷುವು ಬೆಚ್ಚಿದನು....

....ಭಿಕ್ಷುಣಿಯ ಅಂಗಾಂಗಗಳ ರೇಖಾವಿನ್ಯಾಸಗಳನ್ನು ಆಸ್ವಾದಿಸಲಾರಂಭಿಸಿದನು....

ಬುದ್ಧನ ಕಡೆಗೆ ತಿರುಗಿ ಮೆಲ್ಲನೆ ನೋಡಿದನು.

ದೀಪವು ಸಣ್ಣದಾಗುತ್ತ ಬಂದಿತು....

ಕ್ರಮೇಣ ಮೆಲ್ಲನೆ ಆರಿಹೋಯಿತು.

ಭಿಕ್ಷುವು ತತ್ತರಿಸುತ್ತ ತನ್ನ ಗವಾಕ್ಷದಿಂದ ಹೊರ ಬಿದ್ದನು....

ಕೊಂಚ ಹೊತ್ತಾಯಿತು.

ಆಗ "ಹಾ!" ಎಂದು ಹೊರಟ ಚೀತ್ಕಾರವು ಇಡೀ ವಿಹಾರವನ್ನೇ ಒಡೆಯಿತು.

೬

ಯಾರಿಗೂ ಅರ್ಥವಾಗಲಿಲ್ಲ. ಎಷ್ಟು ಯೋಚನೆ ಮಾಡಿದರೂ ಬಗೆಹರಿಯಲಿಲ್ಲ.

ಆಯುರ್ವೇದ ಪಾಠಕ್ಕಾಗಿ ಇಟ್ಟಿದ್ದೊಂದು ಅಸ್ಥಿ ಪಂಜರವು ಭಿಕ್ಷುವಿನ ದೃಢಾಲಿಂಗನದಲ್ಲಿ ಸಿಕ್ಕಿಬಿದ್ದಿತ್ತು.

ಭಿಕ್ಷುವಿನ ಪ್ರಾಣವು ಹಾರಿಹೋಗಿದ್ದಿತು.



# ಕಲೆ—ಕತೆಗಾರರು

ಬಿ. ಜಿ. ಎಲ್. ಸ್ವಾಮಿ .... ಚಿತ್ರಗಳು

ಎಸ್. ವೆಂಕಟರಾವ್—

"ಭಾರತೀಪ್ರಿಯ"....ನಾದನಾಮಕ್ರಿಯಾ,
ಒಂದು ಹಳೆಯ ಕತೆ,
ಸಾಧನೆ.

ಎಸ್. ವೆಂಕಟಾಚಲಪತಿ—

"ದೇಶಕುಲಕರಣಿ"...ಉಪದೇಶ,
ಅಂತರಂಗ.

ಕೆ. ಶ್ರೀಕಂಠೇಶ್ವರನ್—

"ಮೋಹನ"....ಪ್ರತೀಕ್ಷೆ,
ಎಲುಬಿನ ಪ್ರೇಮ,
ಹೂಳಿಟ್ಟ ನೆನಹು.

ಬಿ. ಎಸ್. ವೆಂಕಟರಾವ್—

"..............."....ಡೊಂಕುಬಾಲ,
ಸಿಂಗನ ಪ್ರೇಮ,
ಹುಚ್ಚ.

ಎನ್. ಪಿ. ಲಕ್ಷ್ಮೀನಾರಾಯಣ—

"________"...ಬಂಗಾರದ ಬೆಟ್ಟ,
ವೀಣೆ,
ಬಯಲು ಆಲಯದೊಳಗೊ.

